# ಸಮರ್ಪಣೆ

ವಂದೇ ನವಘನಶ್ಯಾಮಂ ಪೀತಕೌಶೇಯವಾಸಸಂ।
ಸಾನಂದಸುಂದರಂ ಶುದ್ಧಂ ಶ್ರೀಕೃಷ್ಣಂ ಪ್ರಕೃತೇಃಪರಂ॥



ನಮಸ್ತೇ ವಾಸುದೇವಾಯ ನಮಃ ಸಂಕರ್ಷಣಾಯ ಚ।
ಪ್ರದ್ಯುಮ್ನಾಯಾನಿರುದ್ಧಾಯ ತುಭ್ಯಂ ಭಗವತೇ ನಮಃ॥

"ಶ್ರೀಗಿರಿ"

# ವಿನಯ ನಿವೇದನ

---

ಗಿರಿಜಾಬಾಯಿಯ ಕಥಾನಕವು ವರ್ತಮಾನದಲ್ಲಿ ನಿಜವಾಗಿ ನಡೆದುದೆಂದೂ, ಆದರೆ ಒಂದೆರಡು ಸಂದರ್ಭದಲ್ಲಿ ಸ್ವಲ್ಪ ಹೆಚ್ಚುಕಡಿಮೆ ಮಾಡಿಯೂ, ವಾಚಕರ ಮನಸ್ಸಿಗೆ ಹಿಡಿಯುವಂತೆ ಒಂದೆರಡುಕಡೆ ಸ್ವಲ್ಪ ವರ್ಣನೆಮಾಡಿಯೂ ಇರುವದೇ ಹೊರತು ಕಟ್ಟುಕಥೆಯಾಗಿ ತಿಳಿಯಬಾರದೆಂದೂ ಸೂಚನೆ.

ಗಿರಿಜಾಬಾಯಿಯಂತೆ ಪತಿಯ ಅಸನ್ನಿಧಾನದಲ್ಲಿದ್ದು ಪರಿತಪಿಸುತ್ತಿರುವವರು ನಮ್ಮ ಸೋದರಿಯರಲ್ಲಿ ಎಷ್ಟೋಮಂದಿ ಇರುವರು. ಅವರಲ್ಲಿ ಪತಿಯು ದುರಾಚಾರಿಯಾಗಿರುವನೆಂದು ತಾವಾಗಿ ಬಿಟ್ಟುಬಂದವರು ಕೆಲವರೂ, ಧೂರ್ತರಾದ ಪತಿಗಳಿಂದ ದೂರೀಕೃತರಾಗಿರುವವರು ಇನ್ನು ಕೆಲವರೂ, ವಿವೇಚನಾಶೂನ್ಯರಾದ ಅತ್ತೆಮಾವಂದಿರ ದುರಾಗ್ರಹಗಳಿಗೆ ಗುರಿಯಾಗಿ ತ್ಯಾಜ್ಯರಾದವರು ಕೆಲವರೂ ಇರುವರು. ಅಂತಹರಲ್ಲಿ ಗಿರಿಜೆಯಂತೆಯೇ ಕೇವಲ ನಿಷ್ಕಾಮಪ್ರೇಮದಿಂದ ಪತಿಯ ಇಹಪರ ಶ್ರೇಯಸ್ಸಾಧನೆಗಾಗಿ ತಮ್ಮ ಐಹಿಕ ಸುಖದ ಕಡೆಗೆ ಲಕ್ಷ್ಯವಿಲ್ಲದೆ ಆಮುಷ್ಮಿಕವೊಂದನ್ನೇ ಅನುಲಕ್ಷಿಸಿ ನಡೆಯುತ್ತಿರುವ ಮಾಸ್ವಿ ಮಹಿಳೆಯರಿಗೆ, ಆ ಪೂಜ್ಯ ತಪಸ್ವಿಸಿಯರಿಗೆ ಈ ಗಿರಿಜಾಬಾಯಿಯ ಕಥೆಯು ಸಂಗ್ರಾಹ್ಯವೆನ್ನಿಸದಿರಲಾರದೆಂದು ಎಣಿಸುವೆವು.

ಸನ್ಮಾರ್ಗದರ್ಶಿಯ ೩ ನೇ ಸಂಪುಟದ ೨–೪ ನೇ ಸಂಚಿಕೆಗಳಲ್ಲಿರುವ ಪತ್ರ ವ್ಯಾಸಂಗವನ್ನು ನೋಡಿ ಕುತೂಹಲಗೊಂಡಿದ್ದ ನಮ್ಮ ವಾಚಕರಲ್ಲಿ ಕೆಲವರು ಸ. ದ. ಯ ೯–೧೦ ನೇ ಸಂಚಿಕೆಯನ್ನು ನೋಡಿ ಸನ್ಮಾರ್ಗದರ್ಶಿಗೆ ತಾವು ವರ್ಗಣೀದಾರರಾದರಲ್ಲದೆ ಮತ್ತೆ ಕೆಲವರು ವರ್ಗಣೀದಾರರನ್ನೂ ಒದಗಿಸಿ ಕೊಟ್ಟುದುದರಿಂದಲೂ ಮತ್ತೆ ಕೆಲವರು ಪತ್ರಮುಖದಿಂದ ಸದಭಿಪ್ರಾಯವನ್ನು ಸೂಚಿಸಿ ಪ್ರೋತ್ಸಾಹಿಸಿರುವುದರಿಂದಲೂ ಈ ಪುಸ್ತಕವು ಲೋಕಾದರಕ್ಕೆ ಪಾತ್ರವಾಗುವುದೆಂದು ನಂಬಿರುವೆವು. ಪತ್ರ ವ್ಯವಹಾರವು ಬೇರೆಯಾಗಿರುವುದರಿಂದ ಇಲ್ಲಿ ಕೊಡಲಾಗಲಿಲ್ಲ.

ಮುಂದೆ ನೊಂದಸುನಂದಾ, ಸುಧಾರಿಸಿದ ಸುಧಾ, ಚೊಕ್ಕತಾಯಿಯ ಚಿಕ್ಕ ಕಥೆ—ಇವುಗಳು ಪ್ರಕಟವಾಗುವುವು.

**ಇತಿ.**

# ಶುದ್ಧಿ ಪತ್ರಿಕೆ

| ಪುಟ | ಸಾಲು | ಅಶುದ್ಧ | ಶುದ್ಧ |
|---|---|---|---|
| ೧ | ಶ್ಲೋಕದ ನಾಲ್ಕನೆ ಚರಣ | ತಮೇಕಾ | ತ್ವಮೇಕಾ |
| ೨ | ೧ | ಚೊತನವು | ಚೇತನವು |
| ,, | ೩ | ಅರ್ತತ್ರಾಣ | ಆರ್ತತ್ರಾಣ |
| ೩ | ೭ | ಕೋಳಿದುದಕ್ಕೆ | ಕೇಳಿದುದಕ್ಕೆ |
| ೪ | ೮ | ಪೂತ್ರ | ಮಾತ್ರ |
| ,, | ೧೦ | ಯನ್ನಂ | ಯನ್ನೂ |
| ,, | ೧೪ | ಅವರೆಗೆ | ಆವರೆಗೆ |
| ,, | ೧೬ | ಆಗ್ರಹಿಸಿ ಸಮಾಧಾನ | ಆಗ್ರಹ ಅಸಮಾಧಾನ |
| ,, | ೧೭ | ನಾನು ಬರೆ | ನಾನು ನಿಮಗೇ ಬರೆ |
| ೫ | ೧೪ | ಯಾವಾಗಡ | ಯಾವಾಗ |
| ,, | ೨೫ | ಆದೇನು | ಅದೇನು |
| ,, | ೨೮ | ಗಣ | ಗುಣ |
| ೯ | ೨೫+೨೬ | ದಯೆಯೆಂದೇ ನಿನಗಿನ್ನು | ದಯೆಯೊಂದೇ ನನಗಿನ್ನು |
| ೧೧ | ೩ | ಒಮೆಗೆ | ಒಮ್ಮೆಗೇ |
| ,, | ೧೦ | ಆ ಪರಾತ್ಮಕನ | ಆ ಪರಾತ್ಪರನ |
| ,, | ೧೨ | ಪರಮಾತ್ಮನು | ಪರಮಾತ್ಮನ |
| ,, | ೧೮ | ಪ್ರಾಯೋಪವೇಷ | ಪ್ರಾಯೋಪವೇಶ |
| ,, | ೧೯ | ಇಲ್ಲವೆಂದು | ಇಲ್ಲದೊಂದು |
| ,, | ೨೩ | ಅತನ | ಆತನ |
| ೧೩ | ೨೫ | ರೆಲ್ಲರೆನ್ನೂ | ರೆಲ್ಲರನ್ನೂ |
| ೧೪ | ೨ | ಯಿತ | ಯಕ |
| ,, | ೧೨ | ಮೇಲೆಯೂ | ಮೇಲ್ಮೆಯೂ |
| ,, | ೧೩ | ಪಕ್ಷಪಾನ | ಪಕ್ಷಪಾತ |
| ,, | ೧೪ | ಉರ್ಜಿತ | ಊರ್ಜಿತ |
| ,, | ೧೭ | ತೋರಿ | ಕೋರಿ |
| ,, | ೨೧ | ನನ | ನನ್ನ |
| ೧೫ | ೧೧ | ವಿಚಾರಗಳಂ | ವಿಚಾರಗಳು |
| ೧೬ | ೨೭ | ಗಳೆಂದರೆ | ಗಳೆಂದು |
| ೨೧ | ೧೯ | ವರೇ | ವರೆಗೆ |
| ,, | ೨೨ | ವಿರಕ್ತ | ವಿಕ್ರೀತ |
| ,, | ೨೫ | ಉದ್ವಿನ್ನತೆ | ಉದ್ವಿಗ್ನತೆ |
| ,, | ,, | ನನಗಗೆ | ನನಗೀ |
| ೨೨ | ೧೫ | ರಾಧೆಯು | ರಾಧೆಯ |
| ೨೩ | ೧೨ | ಪೊಂಪುಳ | ಪೊಂಪುಳಿ |
| ,, | ೧೪ | ವೇನ | ವೇಗ |

| ಪುಟ | ಸಾಲು | ಅಶುದ್ಧ | ಶುದ್ಧ |
|---|---|---|---|
| ,, | ೧೭ | ಮೇರಿಸಿ | ಮೇಲಿರಿಸಿ |
| ,, | ೩೦ | ಅನುಭೂತ | ಅನನುಭೂತಾ |
| ೨೪ | ೧೭ | ನನ್ಯಾಕೆ | ನಾನ್ಯಾಕೆ |
| ೨೬ (೪೨) | ೨೬ | ನೀನು | ನಾನು |
| ೨೭ (೪೩) | ೭ | ಬಲವು | ಒಲವು |
| ೨೮ (೪೪) | ೧೮ | ಮುಡಿದಡಹಿ ? ಗಿರಿ ನಿನ್ನ ಗಿರಿ, | ಮುಡಿದಡಹೊ, ' ಗಿರಿ ನಿನ್ನ ಗುರಿ |
| ೩೩ | ೧೫ | ಅಂದರ | ಅಂತರ |
| ೩೮ | ೧೨ | ಪತ್ನಿಯನ್ನು ಕೈಯನ್ನೂ | ಪತ್ನಿಯ ಕೈಯನ್ನು |
| ,, | ೧೩ | ತ್ರೀವ್ರ | ತೀವ್ರ |
| ೩೯ | ೧೨ | ಯೋಗಾ | ಯೋಗಾ:— |
| ೪೩ | ೧೬ | ಬಿಡಸ | ಬಿಡಿಸ |
| ೪೩ | ೧ | ಮುಖವನ್ನು ತಿರಗಿಸಿ ಮೆಲ್ಲನೆ | ಗಿರಿಯು ಮುಖವನ್ನು ತನ್ನ ಕಡೆಗೆ ತಿರುಗಿಸಿಕೊಂಡು ಮೆಲ್ಲನೆ |
| ,, | ೫ | ಸ್ವಲ್ಪ | ಸ್ವಸ್ಥ |
| ,, | ೧೧ | ಮುಖನ್ನು | ಮುಖವನ್ನು |
| ,, | ೧೬ | ಕಣ್ನು | ಕಣ್ಣು |
| ೪೪ | ೧೨ | ಕಡಿದಳು | ಕುಡಿದಳು |
| ೫೨ | ೧೪ | ಅಂದದ್ದೆಲ್ಲಾ | ಆದದ್ದೆಲ್ಲಾ |
| ೫೪ | ೧೨ | ಬರತ್ತ | ಬರುತ್ತ |
| ೫೫ | ೩ | ಬಲವಿಲ್ಲ | ಒಲವಿಲ್ಲ |
| ,, | ೨೪ | ಪಾಣ | ಪ್ರಾಣ |
| ೫೬ | ೨ | ಸಹಕಾರಣ | ಸಕಾರಣ |
| ,, | ೭ | ನೀವು | ತಾವು |
| ೫೭ | ೨೧ | (ವಿಣ್ಣನಾಗಿ) | (ನಿರ್ವಿಣ್ಣನಾಗಿ) |
| ೫೯ | ೫ | ಭಾವಿಸಿ | ಧಾವಿಸಿ |
| ,, | ೧೭ | (ನಸನಗುತ್ತ) | (ನಸುನಗುತ್ತ) |
| ,, | ೧೯ | ಬರಲೊಲ್ಲನೆಂದು | ಬರಲೊಲ್ಲೆನೆಂದು |
| ೬೦ | ೯ | ವೆಷ್ಟಾವರೂ | ವೆಷ್ಟಾದರೂ |



॥ ಶ್ರೀಃ ॥

# ಗಿರಿಜಾಬಾಯಿ.

I

ನ ತಾತೋ ನ ಮಾತಾ ನ ಬಂಧುರ್ನದಾತಾ ।
ನ ಪುತ್ರೋ ನ ಪುತ್ರೀ ನ ಭೃತ್ಯೋ ನ ಭರ್ತಾ ॥
ನ ಜಾಯಾ ನ ವಿದ್ಯಾ ನ ವೃತ್ತಿರ್ಮಮೈವ ।
ಗತಿಸ್ತ್ವಂಗತಿಸ್ತ್ವಂ ತಮೇಕಾ............

" ಭಗವಂತ! ಸಾಕುಮಾಡು. ಈ ನಾರೀಜನ್ಮವನ್ನಿಷ್ಟಕ್ಕೆ ಸಾಕುಮಾಡು. ಪೆಣ್ಣಾಗಿ ಪುಟ್ಟುವುದಿನ್ನೆಂದಿಗೂ ಬೇಡ" ವೆಂದು ಮಹಾತಾಯಿ ಸೀತಾದೇವಿಯೇ ಹೇಳಿರುವಳು. ಇನ್ನು ನನ್ನಂಥ ಅಧಮಾಧಮ ಪ್ರಾಣಿಗೆ ಹೇಳುವುದಿನ್ನೇನು ?

" ಜಗನ್ನಾಥಾ ! ದೀನನಾಥನು ನೀನಲ್ಲವೆ ? ನಿನಗೇಕಿಷ್ಟು ಉದಾಸೀನ ? ‹ ನಿನ್ನ ಕರ್ಮವೇ ಅಂತಹದಿರುವುದನ್ನರಿಯೆಯಾ ?' ನಿಜ, ಪ್ರಭು, ನಾನು ಅಪರಾಧಿನಿ— ಮಹಾಪರಾಧಿನಿಯಾಗಿರುವುದು ನಿಜ. ಆದರೆ ಮಹಾಪ್ರಭೋ, ನಾನೇನುಮಾಡಲಿ ? ನಿನ್ನ ಮಾಯೆ ನನ್ನನ್ನಾವರಿಸಿಕೊಂಡಿತು. ಅದರ ಮಹಿಮೆಯಿಂದ ನಾನು ಆಶಾಪರವಶಳಾದೆನು. ಕಠಿನತಮವಾಗಿದ್ದ ಆ ನನ್ನ ಮನಸ್ಸು-ಇಂದ್ರಿಯಗಳ ವೇಗಕ್ಕೆ ಸಿಲುಕದೆ ವಿಕಾರವಶವಾಗದೆ ಇದ್ದ ಮನಸ್ಸು ನಿನ್ನ ಮಾಯಾಜಾಲಕ್ಕೊಳಗಾಗಿ ಅದು ಸಡಿಲವಾಗಿ ಹೋಯಿತು. ಬುದ್ಧಿ ನನ್ನದಲ್ಲವಾಯಿತು.

" ಕಡೆಗೆ, ದೇವ—'ಸತಿಯು ಪರಗತಿಸಾಧನೆಗೆ ಪತಿಯೇ ಆಶ್ರಯವಸ್ತು. ಪತಿಯ ಪರಿಚರ್ಯೆಯೇ ಪರಗತಿಯ ಸೋಪಾನ' ಎಂಬುದೊಂದು ಸೂಕ್ತಿ, ಕಿವಿಯೊಳಗೆ ಹೊಕ್ಕು ಹೃದಯವನ್ನು ಸೇರಿ ಬುದ್ಧಿಗೆ ಉಪದೇಶಿಸಿತು. ಸಾಲದುದಕ್ಕೆ ನೀನೆ ಅಭಯ ಪ್ರದನಾಗಲಿಲ್ಲವೇ—ಹೇಳು. ದೇವ, ‹ ನಿನಗಿದು ಪಾಪಹೇತುವಾಗದು, ನೀನಿದನ್ನು ಮಾಡುವುದು ನ್ಯಾಯ, ಎಂದು ನೀನೇ ಹೇಳಿದ ವಾಕ್ಯಕ್ಕೆ ಬೆಲೆಯುಂಟೇ-ಇಲ್ಲವೆ ? ಅದನ್ನಾದರೂ ಹೇಳಲಾರೆಯಾ ? ಇಷ್ಟಾದ

ಮೇಲೆ ಈ ದೀನ ಜೀವನವು ಆಶೆಗೆ ಬಲಿ ಬಿದ್ದುದು, ನಿನಗೆ ಅಪರಾಧವಾಗಿ ತೋರುವುದೇ ಜಗನ್ನಾಥಾ! ಆರ್ತತ್ರಾಣಪರಾಯಣನು ನೀನಾಗಿರುವಲ್ಲಿ ನಿನ್ನನ್ನು ಬಿಟ್ಟು ನಾನು ಮತ್ತಾರಲ್ಲಿ ಹೇಳಿಕೊಳ್ಳಲಿ? ತಾಯ್ತಂದೆಯರಲ್ಲಿ ಹೇಳಿಕೊಂಡು ಅವರ ಮನದಳಲನ್ನು ಹೆಚ್ಚಿಸಲಾರೆನು! ಒಡಹುಟ್ಟಿದವರಲ್ಲಿ ಹೇಳಿಕೊಂಡು ಫಲವಿಲ್ಲ; ಅಭಿಮಾನವೂ ಕಡಿಮೆಯಾಗಿಲ್ಲ. ಒಡನಾಡಿಯರೊಡನಾಡಿಕೊಳ್ಳಲಿಕ್ಕೆ ಮನಸ್ಸು ಹೇಸುವುದು. ಹೇಳಿ ನಗೆಗೇಡಲ್ಲದೆ ಬೇರೆ ನೀಗುವುದೇನೂ ಇಲ್ಲ. ಅದಾವಬಗೆಯಿಂದಲೂ ನನ್ನ ಬಗೆ ಹರಿಯದಂತಾಗೆ ನಿನ್ನನ್ನೇ ಮರೆಹೊಕ್ಕೆನು. ಈಗ ನೀನೇನು ಮಾಡುವೆ? ನಿನ್ನಲ್ಲಿಗೆನ್ನನ್ನೇ ಕರೆದೊಯ್ಯುವೆಯೋ? ನಿನ್ನಂತರಂಗ ಭಕ್ತನ ಮನಸ್ಸಿಗಿಷ್ಟಾದರೂ ಕನಿಕರವೆಂಬುದನ್ನು ಹುಟ್ಟಿಸಿ, ಆತನ ಸಹಕಾರ, ಅನುಗ್ರಹಗಳಿಂದ ನಿನ್ನೀದಾಸಿಯ ಜನ್ಮವನ್ನು ಪುನೀತವಮಾಡುವೆಯೋ? ಬೇಕಾದಂತೆ ಮಾಡು."

ಮಧ್ಯಾಹ್ನ ಸುಮಾರುಎರಡು ಘಂಟೆ ಇರಬಹುದು. ಗಿರಿಜೆಯು ಚಾಪೆಯ ಮೇಲೆ ಮಲಗಿ, ಮೇಲೆ ಹೇಳಿದಂತೆ ಹೇಳಿಕೊಳ್ಳುತ್ತ ಕಣ್ಣೀರು ಸುರಿಸುತ್ತಿದ್ದಳು ಮುಖವು ಬಾಡಿ ಹೋಗಿ ಕಣ್ಣುಗಳು ಗುಳಿ ಬಿದ್ದು ಕುತ್ತಿಗೆ ಉದ್ದವಾದಂತೆ ಕಂಡುಬರುತ್ತಿದ್ದಿತು. ಗಿರಿಜೆಯು ತವರುಮನೆಗೆ ಬಂದು ಇಲ್ಲಿಯೇ ಬಲವಾಗಿ ಕಾಯಿಲೆ ಮಲಗಿದಳು. ಹೀಗಾಗಿ ತನ್ನೊಳಗೆ ಮೇಲೆ ಹೇಳಿದಂತೆ ದೇವರಲ್ಲಿ ಮೊರೆಯಿಡುತ್ತಿದ್ದಳು.

ಸ್ವಲ್ಪ ಹೊತ್ತಿನ ಮೇಲೆ ಅಂಚೆಯವನು ಬಂದು ಮೂರು ಕಾಗದಗಳನ್ನು ತಂದುಕೊಟ್ಟು ಹೊರಟುಹೋದನು. ಗಿರಿಜೆಯು ಬಳಿಯಲ್ಲಿ ಮತ್ತಾರೂ ಇರಲಿಲ್ಲ ಎಲ್ಲರೂ ಅವರವರ ಕೆಲಸದಲ್ಲಿರುತ್ತಿದ್ದುದರಿಂದ ಗಿರಿಯು (ಗಿರಿಜೆಯು) ತಾನೇ ಎದ್ದು ಬಂದುಕಾಗದಗಳನ್ನು ತೆಗೆದುಕೊಂಡು ಬಂದು ಹಾಸಿಗೆಯ ಮೇಲೆ ಕುಳಿತು ನೋಡಿದಳು. ಬಂದಿದ್ದ ಮೂರು ಕಾಗದಗಳಲ್ಲಿ ಒಂದು ತನಗೆ ತನ್ನ ಅಕ್ಕ ಗಂಗಾಬಾಯಿ ಬರೆದಿದ್ದುದೂ ಮತ್ತೊಂದು ಗವೀಪುರದ ಆರ್ಯಮಹಿಳಾಸಮಾಜದ ಕಾರ್ಯದರ್ಶಿನಿಯಿಂದ ಬಂದುದು. ಇನ್ನೊಂದು ತನ್ನ ತಮ್ಮ ಶೀನಪ್ಪನಿಗೆ ತನ್ನಪತಿಯು ಬರೆದಿದ್ದುದು. ಮೂರನೆಯ ಪತ್ರವನ್ನು ತನಗೆ ಬರೆಯದೆ ತಮ್ಮನಿಗೆ ಮಾತ್ರ ಬರೆದಿದ್ದುದನ್ನು ನೋಡಿ ಗಿರಿಯ ಮುಖವು ಕಪ್ಪಾಗಿ ಹೋಯಿತು. ಸ್ವಲ್ಪ ಹೊತ್ತಿನವರೆಗೆ ಹಾಗೆಯೇ ಸ್ತಬ್ಧವಾಗಿ ಕುಳಿತಿದ್ದಳು. ಆ ಬಳಿಕ ಸ್ವಲ್ಪ ಹೊತ್ತು ತನ್ನ

ಲ್ಲಿಯೇ ಏನೇನನ್ನೋ ಹೇಳಿಕೊಂಡಳು. ನಂತರ ಮನಸ್ಸನ್ನು ಹತೋಟಿಗೆ ತಂದು ಕೊಂಡು ಆ ಮೂರು ಪತ್ರಗಳನ್ನೂ ಕ್ರಮವಾಗಿ ಓದಿದಳು. ಪತ್ರಗಳು ಹೀಗೆ ಬರೆಯಲ್ಪಟ್ಟಿದ್ದವು.

(ಅಕ್ಕನ ಪತ್ರ. ೧.)

" ಸೌ॥ ಗಿರಿಗೆ ಆಶೀರ್ವಾದಗಳು.

ಈಚೆಗೆ ನಿನ್ನ ಕಾಗದವೇ ಬರುವುದಿಲ್ಲ. ಕಾರಣವೇನೆಂದು ಊರಿಗೆ ಬರೆದು ಕೇಳಿದುದಕ್ಕೆ ಶ್ರೀ॥ ತೀ॥ ರವರೂ ಚಿ॥ ರಾ॥ ಶೀನಪ್ಪನೂ ಬರೆದಿದ್ದ ಕಾಗದದಿಂದ ನಿನಗೆ ತುಂಬ ಕಾಯಿಲೆಯಾಗಿರುವುದಾಗಿ ತಿಳಿದು ಮನಸ್ಸಿಗೆ ತುಂಬಾ ಗಾಭರಿಯಾಗಿದೆ. ಆದುದರಿಂದ ನಾನು ಚಿ॥ ಯೊಡನೆ ಈ ದಿನವೇ ಹೊರಟು ಅಲ್ಲಿಗೆ ಬರುತ್ತೇನೆ. ಬಾಕಿ ಸಂಗತಿಯೇನಿದ್ದರೂ ಮುಖತಃ ನಡೆಯಲಿ. ನನ್ನ ನಮಸ್ಕಾರ ಪೂರ್ವಕ ವಿಜ್ಞಾಪನಾಶೀರ್ವಾದಗಳನ್ನು ಎಲ್ಲರಿಗೂ ನಿವೇದಿಸಬೇಕೆಂದು ಆಶಿಸುವ, ನಿನ್ನ ಅಕ್ಕ ಗಂಗಾ '

(ಕಾರ್ಯದರ್ಶಿನಿಯ ಪತ್ರ ೨)

" ತಾಯಿ !

ನೀವು ಹೊರಟು ಹೋದುದು ಮೊದಲು ನಿಮ್ಮ ಕ್ಷೇಮ ಸಮಾಚಾರವೇ ತಿಳಿದಿರಲಿಲ್ಲ. ಈಚೆಗೆ ಅಲ್ಲಿಂದ ಬಂದವರು ಹೇಳಿದುದರಲ್ಲಿ ನೀವು ತುಂಬ ಅಸ್ವಸ್ಥರಾಗಿರುವಿರೆಂದು ತಿಳಿದು ತುಂಬ ದುಃಖವಾಗಿದೆ. ಸಮಾಜದ ಕೆಲಸವೇನೂ ಈಚೆಗೆ ತೃಪ್ತಿಕರವಾಗಿ ನಡೆದಿಲ್ಲ. ಮೊದಲಿನಂತೆ ಮಹಿಳೆಯರಾರೂ ಈಗ ಬರುವದಿಲ್ಲ. ಎಲ್ಲರೂ ಉದಾಸೀನರಾಗಿದ್ದಾರೆ. ಈ ಸಾರಿ ಹೊರಡಬೇಕಾಗಿದ್ದ ತ್ರೈಮಾಸಿಕ ಪತ್ರಿಕೆ ಹೊರಡಲು ಸಾಧ್ಯವಿಲ್ಲವಾಗಿದೆ. ಈಗೇನು ಮಾಡಬೇಕೆಂಬುದಕ್ಕೂ ನಿಮ್ಮ ದೇಹಸ್ಥಿತಿ ವಿಚಾರಕ್ಕೂ ಕೂಡಲೇ ಬರೆಯಬೇಕೆಂದು ಸಮಾಜದ ಮಹಿಳೆಯರೆಲ್ಲರಪರವಾಗಿ ಪ್ರಾರ್ಥಿಸುತ್ತೇನೆ. ಉಳಿದುದನ್ನು ತಮ್ಮ ಉತ್ತರವನ್ನು ನೋಡಿ ಬರೆಯುತ್ತೇನೆ.

ಇಂತು ಬಿನ್ನವಿಸುವ ವಿಧೇಯಳಾದ
**ವೇಣೂಬಾಯಿ, "**

( ಪತಿಯ ಪತ್ರದ ಛಾಯೆ )

" ಪ್ರಿಯ ಬಂಧು.

ನಿಮ್ಮ ಪತ್ರವು ಕೈ ಸೇರಿತು. ನನಗೆ ವಿರಾಮವೇ ಇಲ್ಲದಂತಾಗಿದೆ. ಬೇಸರಿಕೆಯಿಂದ ಬರೆಯುವದಾಗದು. ನನ್ನಿಂದ ಸಕಾಲಕ್ಕೆ ಕಾಗದಗಳು ಬರಲಿಲ್ಲೆಂದು ಮಾತ್ರ ಯಾರೂ ಆಕ್ಷೇಪಿಸಬಾರದಾಗಿ ನನ್ನ ಕೋರಿಕೆ.

ನಿಮ್ಮ ಕಾಗದದಿಂದ ನಿಮ್ಮ ಅಕ್ಕನ ದೇಹಸ್ಥಿತಿ ತಿಳಿದು ಬಂದಿತು. ಪ್ರತಿಯೊಬ್ಬರೂ ಪರಮಾತ್ಮನ ಇಚ್ಛೆಗೆ ಒಳಪಡಲೇ ಬೇಕು. ಎಲ್ಲವೂ ಆತನ ಇಚ್ಛಾಧೀನ ಪಾತ್ರವಾಗಿರುವುದು. ವೃಥಾ ಶೋಕ, ಕಳವಳ ಚಿಂತೆಗಳಿಗೆ ಈಡಾಗಿ ದೇಹದ ಕಡೆಗೆ ದುರ್ಲಕ್ಷ್ಯ ಮಾಡಿ ರೋಗದಲ್ಲಿ ನರಳುವುದು ಮಾತ್ರ ಯಾರಿಗೂ ಸರಿಯಾದುದಲ್ಲ. ಬರತಕ್ಕ ಸುಖ ದುಃಖಗಳನ್ನು ತಾಳ್ಮೆಯಿಂದ ಸಹಿಸಿಕೊಳ್ಳುತ್ತ ಬಂದರೆ ಪರಮಾತ್ಮನು ಪ್ರಸನ್ನನಾಗುವುದರಲ್ಲಿ ಸಂದೇಹವಿಲ್ಲ. ನಾನಾದರೂ ಏನು ಮಾಡತಕ್ಕವನು ? ಪರಿಸ್ಥಿತಿ ಚಕ್ರದಲ್ಲಿ ಸಿಲುಕಿ ಕಾಲದ ಅನುಕೂಲತೆಯನ್ನು ದೈವದ ಸಹಾಯವನ್ನೂ ಕಾಯುತ್ತಿರುವೆನು. ಸಮೃದ್ಧಿಮಯ ಕಾಲವು ಬರುವುದು. ಸುಖ ಸಂತೋಷಗಳೂ ಉಂಟಾಗುವುವು; ಹೀಗೆ ನನ್ನ ಭರವಸೆ. ಅವರೆಗೆ ಮಾತ್ರ ಸಹಿಸಿಕೊಂಡಿರಬೇಕೆಂದು ನಿಮ್ಮ ಅಕ್ಕನಿಗೆ ತಿಳಿಯಿಸುವುದು. ಈಗ ಆಕೆ ತುಂಬ ಆಗ್ರಹಸಿ ಸಮಾಧಾನದಲ್ಲಿರಬಹುದಾಗಿ ನನಗೆ ತೋರುವುದರಿಂದ ಈಗ ನಾನು ಬರೆದಿರುವೆನು. ನೀವೇ ಈ ವಿಚಾರವನ್ನು ಆಕೆಗೆ ತಿಳಿಯಹೇಳಿ ಅವಳ ಆರೋಗ್ಯರಕ್ಷಣೆಯ ಭಾರವನ್ನು ವಹಿಸಬೇಕು. ಬಹುದೂರದಲ್ಲಿರುವ ನಾನು ನೆನೆದಾಗ ಓಡಿಬರುವೆಂಬಂತಿಲ್ಲವಾದ್ದರಿಂದ ಹೀಗೆ ಬರೆಯಬೇಕಾಯ್ತು. ಇಲ್ಲಿ ನಮ್ಮ ಮನೆಯವರೆಲ್ಲರೊಡನೆ ನಾನೂ ಕ್ಷೇಮದಿಂದಿರುತ್ತೇನೆ.

ಇತಿ, ನಿಮ್ಮ ಹಿತ ಚಿಂತಕ ಯೋಗಾನಂದ "

ಪತ್ರಾವಲೋಕನಾನಂತರ ಗಿರಿಜಾಬಾಯಿಯ ಕಣ್ಣುಗಳಿಂದ ನಾಲ್ಕಾರು ಬಿಂದುಗಳುದುರಿದುವು. ಅಷ್ಟರಲ್ಲಿಯೇ ಸೀರೆಯ ಸೆರಗಿನ ತುದಿಯಿಂದ ಕಣ್ಣೊರಸಿಕೊಂಡು ಕುಳಿತು ಏನೇನೋ ವಿಚಾರ ಮಾಡಿದಳು. ತಾಪವು ಹೆಚ್ಚಿತು. ಮುಸುಕಿಟ್ಟು ಮಲಗಿದಳು : ಬಿಕ್ಕಿ ಬಿಕ್ಕಿ ಅತ್ತುಬಿಟ್ಟಳು. ಅಷ್ಟರಲ್ಲಿ ಯಾರೋ ನಡೆದು ಬರುವ ಸಪ್ಪಳವಾಗಲು ಕಾಗದಗಳನ್ನು ತಲೆದಿಂಬಿನ ಮೇಲ್ಗಡೆಯಿರಿಸಿ ನಿದ್ರಿಸುವಂತೆ ಮುಸುಕಿಟ್ಟು ಮಲಗಿ ಬಿಟ್ಟಳು.

ಒಂದೆರಡು ನಿಮಿಷದಲ್ಲಿ ಗಿರಿಯ ತಮ್ಮನಾದ ೨೭ ವರ್ಷದ ಯುವಕ ಶೀನಪ್ಪನು ಬಂದು ನಿಂತು "ಅಕ್ಕಾ ! ಅಕ್ಕಾ ! ಗಿರಿಯಕ್ಕಾ !" ಎಂದು ಮೂರು ಬಾರಿ ಕರೆದನು. ಗಿರಿಜೆಯು ಮಾತನಾಡಲಿಲ್ಲ. ನಿದ್ರೆ ಇರಬಹುದೆಂದು ಅಲ್ಲಿಯೇ ನಿಂತು ನೋಡಿದನು. ಕಾಗದಗಳು ದೃಷ್ಟಿಗೆ ಬೀಳಲು ಅವು ಮೂರನ್ನೂ ತೆಗೆದುಕೊಂಡು ಅಲ್ಲಿಯೇ ಕುಳಿತು ಓದಿದನು. ತನ್ನ ಹಿರಿಯಕ್ಕನು ಬರುವ ವರ್ತಮಾನ ತಿಳಿದು ಆನಂದವಿಮ್ಮಡಿಯಾಯಿತು. ಗಿರಿಜೆಯು ಹಣೆಯ ಮೇಲೆ ಕೈಯಿರಿಸಿ ಮತ್ತೆ ಕೂಗಿದನು.

ಈ ಬಾರಿ ಗಿರಿಜೆಯು ಅರೆನಿದ್ದೆಯಿಂದೆದ್ದಂತೆ ಗಾಭರಿಯಾದವಳಾಗಿ ಎದ್ದು, 'ಯಾಕೆ, ಶೀನು, ಕರೆದೆಯಾಕೆ ? ಏನಾಯ್ತು,' ಎಂದಳು.

ಶೀನಪ್ಪ—ಏನೂ ಆಗಲಿಲ್ಲ. ಇಷ್ಟು ಹೊತ್ತಿನಲ್ಲಿ ಇದೆಂತಹ ನಿದ್ದೆ, ಗಿರಿಯಕ್ಕಾ ?

ಗಿರಿಜೆ—ಕೆಲಸ ಮಾಡುವ ಶಕ್ತಿಯಿಲ್ಲದೆ ಬೇಸರಿಕೆ ಹೆಚ್ಚಾಗಿ ನಿದ್ದೆ ಮಾಡುವುದು ಹೊರತು ಮತ್ತಿನ್ನೇನು ಮಾಡಬೇಕು.

ಶೀನಪ್ಪ—ಆದಿರಲಿ. ಟಪಾಲಿನವನು ಯಾವಾಗದ ಬಂದಿದ್ದ ?

ಗಿರಿ—ಈಗ ಅರ್ಧ ಘಂಟೆಗೆ ಹಿಂದೆ.

ಶೀನಪ್ಪ—ಮೂರು ಕಾಗದಗಳನ್ನೂ ಓದಿದೆಯೊ ?

ಗಿರಿ—ಓದಿದೆ.

ಶೀನಪ್ಪ—ಗಂಗಕ್ಕನೂ ಈ ದಿನವೇ ಬಂದಾಳಲ್ಲವೆ ?

ಗಿರಿ—ಇರಬಹುದು.

ಶೀನಪ್ಪ—ಭಾವನ ಕಾಗದವು ನಿನಗೆ ಅರ್ಥವಾಗಲಿಲ್ಲವೇ ?

ಗಿರಿ—ಆಯಿತು.

ಶೀನಪ್ಪ—ಹಾಗೇಕೆ ಬರೆದಿರುವರು ?

ಗಿರಿ—ಸರಿಯಾಗಿಯೇ ಬರೆದಿದ್ದಾರೆ.

ಶೀನಪ್ಪ—ನನಗೇನೋ ಅಭಿಪ್ರಾಯವಾಗಲಿಲ್ಲ.

ಗಿರಿ—ಯಾಕೆ ಶೀನು ? ಅದೇನು ಒಗಟೆಯಲ್ಲವಲ್ಲಾ !

ಶೀನಪ್ಪ—ಅಹುದೇ. ಅಕ್ಕಾ ! ಅತನಿಷ್ಟು ಉದಾಸೀನದವನೆಂದು ನಾನೇನೂ ತಿಳಿದಿರಲಿಲ್ಲ. ನನ್ನ ಕಾಗದಕ್ಕೆ, ನಿನಗೆ ಕಾಯಿಲೆಯಾಗಿದೆಯೆಂದೂ ಬೇಗ ಬಂದರೆ ಗಣವೆಂದೂ ನಾನು ಬರೆದಿದ್ದ ವಿಚಾರಕ್ಕೆ ಇದೀಗ ಸರಿಯಾದ ಉತ್ತರ !

ಗಿರಿ—ಅಲ್ಲವೋ, ಶೀನು ! ರೇಗಬೇಡ, ತಾಳ್ಮೆಯನ್ನು ತೆಗೆದುಕೋ. ನೀನು ಬಾರೆಂದು ಬರೆದು ಬಿಟ್ಟ ಮಾತ್ರಕ್ಕೆ ಅವರು ಹಾರಿ ಬಂದು ಬಿಡಲಾದೀತೇ ? ನೂರಾರು, ಸಾವಿರಾರು ಕೆಲಸಗಳು, ನೂರಾರು ಮಿತ್ರ ಜನರು, ಅದೆಲ್ಲಾ ತೊಡಕಿನಲ್ಲಿರುವವರಿಗೆ ಥಟ್ಟನೆ ಬಿಟ್ಟು ಹೊರಟು ಬರಲಾದೀತೆ ?

ಶೀನಪ್ಪ—ಸಾಕು, ಸುಮ್ಮನಿರು. ಅಕ್ಕಾ ! ಹಗಲೂ ರಾತ್ರಿ ಹಾತೊರೆಯುತ್ತ ಕೊರಗುತ್ತಾ ಒದ್ದಾಡುತ್ತಿರುವವಳು, ಈಗ ಮಾತ್ರ ಗಂಡನ ಕಡೆಗೆ ವಕಾಲತ್ತು ತೆಗೆದುಕೊಂಡು ಮಾತಾಡುತ್ತಿಲ್ಲವೇ ?

ಗಿರಿ—ಕೂಡದೇನು. ತಪ್ಪೋ, ಶೀನು ?

ಶೀನಪ್ಪ—ತಪ್ಪಲ್ಲ, ನೀನು ಹೇಳಿದ್ದೆಲ್ಲಾ ನೆಪ್ಪೇ ಸರಿ. ಹೋಗಲಿ, ಬಿಡು. ಈಗ ನಾನು ಅವರಿಗೆ ಉತ್ತರವನ್ನು ಕೊಡಬೇಕೋ-ಬೇಡವೋ ? ಇಲ್ಲವೆ-ನೀನೇ ಕೊಡುತ್ತೀಯೋ ?

ಗಿರಿ—ನಿನಗೆ ಬರೆದಿರುವ ಕಾಗದಕ್ಕೆ ನಾನೇಕೆ ಉತ್ತರ ಕೊಡಲಿ ? ನೀನೇ ಒಂದಿಷ್ಟು ಬರೆದುಬಿಡು.

ಶೀನಪ್ಪ—ಹಾಗಾದರೆ, ಏನೆಂದು ಬರೆಯಲಿ, ಅದನ್ನಾದರನೂ ಹೇಳು.

ಗಿರಿ—ನಾನು ನಿನಗೆ ಹೇಳಿಕೊಡಲಿಕ್ಕೆ ನೀನೇನೂ ಎಳೆ ಕೂಸಲ್ಲವಷ್ಟೆ !

ಶೀನಪ್ಪ—ಅಹುದೆ. ನಿನ್ನ ಗಂಡನಿಗೆ ಬರೆಯ ಬೇಕೆಂದರೆ ನಾನು ಎಳೆ ಕೂಸೇ ! ನಾನೇ ಬರೆಯ ಬೇಕಾದರೆ ನನಗೆ ತೋಚಿದಂತೆಲ್ಲಾ ಬರೆದೇನು ! ನಿನಗೆ ಹೇಳೆಂದು ದೊಡ್ಡದಾಗಿ ಉಪಚಾರ ಹೇಳಿ ಬರೆದಿದ್ದಾರಲ್ಲ. ಅದಕ್ಕೇನುತ್ತರ ಹೇಳೆಂದರೆ, ಏನೇನೋ ಪುರಾಣ ?

ಗಿರಿ—ಅವರೇನೂ ಉತ್ತರವನ್ನು ಅಪೇಕ್ಷಿಸಿಲ್ಲ. ಬರೆಯದಿದ್ದರೂ ಅವರ ಆಕ್ಷೇಪವೂ ಬರುವಂತಿಲ್ಲ. ಒಂದು ವೇಳೆ ಉತ್ತರ ಕೊಡುವುದಾದರೆ ಮತ್ತಿನ್ನೇನು ಬರೆಯುವೆ ? ಇಷ್ಟು ಬರೆದರೆ ಸಾಕು:—" ಕಾಗದವನ್ನೇ ಕೊಟ್ಟು ಬಿಟ್ಟೆ. ' ಆಜ್ಞೆಯನ್ನು ಶಿರಸಾವಹಿಸಿ ಪಾಲಿಸುವೆ ' ನೆಂಬ ಉತ್ತರ ಬಂತು. ಮತ್ತು, ' ದೇಹಸ್ಥಿತಿ-ಮನಸ್ಥಿತಿ ಎಲ್ಲಾ ಈಗ ನೆಟ್ಟಗಾಗುತ್ತ ಬಂದಿದೆ. ಆರೋಗ್ಯ ರಕ್ಷಣೆಯಲ್ಲಿ ಜಾಗರೂಕತೆಯೂ ವಹಿಸಲ್ಪಟ್ಟಿದೆ. ಗೃಹವಿಲಾಸದಲ್ಲಿದ್ದುದು ಅವಶ್ಯವನುಭೋಕ್ತವ್ಯಗಳಾದುವು. ಯಾವ ಯಾವವು ಬರಲಿಕ್ಕಿರುವವೂ ಅವೆಲ್ಲವನ್ನೂ ಸಂತೋಷದಿಂದಿರುಗೊಳ್ಳಲು ಸಿದ್ಧವಾಗಿಯೇ ಇರುವುದಾಗಿದೆ. ಕೋಪತಾಪಗ

ಗಳೇನೂ ಇಲ್ಲ. ಕೆಲಸವನ್ನು ನಿರಾತಂಕವಾಗಿ ನೋಡಿಕೊಳ್ಳುತ್ತಿರಬಹುದು. ಈಗೇನೂ ಈ ಕಡೆಗೆ ಧಾವಿಸಿ ಬರಬೇಕೆಂಬ ಆಗತ್ಯವಿಲ್ಲ. ಅಂಥಾ ವೇಳೆ ಕಂಡು ಬಂದಾಗ ಮಾತ್ರ ನಿವೇದಿಸಲಾಗುತ್ತದೆ ; ಆದರೂ ಆಗಲೂ ಸ್ವಂತ ಕಾರ್ಯಗಳಿಗೆ ಹಾನಿಯನ್ನು ತಂದುಕೊಳ್ಳುವಂತೆ ಮಾತ್ರ ಮಾಡಬೇಕಾಗಿಲ್ಲ.' ಹೀಗೆ ಅಭಿಪ್ರಾಯ ನಿವೇದನ ವಾಗಿದೆ. ”

ಶೀನಪ್ಪ—ಅಬ್ಬ! ನಿಮ್ಮ ಹೆಂಗಸರ ನಾಲಿಗೆಯಲ್ಲಿ ಎಂತೆಂತಹ ಮೊನೆ ವಾಕು ಹೊರಡುತ್ತದೆ? 'ಹೆಂಗಸುಗಳು ಪ್ರಾಣ!' ಆಹಾ!? ಇದರಲ್ಲಿ ತೋರುವ ಮಾರ್ದವಕ್ಕೆ ಪರಿಮಿತಿಯೇ ಇಲ್ಲ. ಯಾವನೋ ಮೂಢನೇ ಇದನ್ನು ಹೇಳಿಟ್ಟಿರಬೇಕು.

ಗಿರಿ—ಹುಚ್ಚರೋ, ಧಡ್ಡರೋ, ಏನಾದರೂ ಆಗಲಿ. ಸ್ವಕಾರ್ಯಧುರಂಧರರೂ ಸ್ವಾಭಿಮಾನಿಗಳೂ ಆದ ಪುರುಷ ಪ್ರಾಣದ [illegible] ಸ್ವಭಾವವೀಗ ಸ್ತುತ್ಯವೇ! ಇರಲಿ. ಶೀನು, ನಿನಗೆ ಬೇರೇನೂ ಕೆಲಸವಿಲ್ಲವೇ?

ಶೀನಪ್ಪ—ಯಾಕೆ? ನಿನಗೆ ಬೇಸರವಾಯಿತೇನು?

ಗಿರಿ—ಬೇಸರವಲ್ಲ. ತಲೆನೋವು [illegible]ಯಾಗಿದೆ. ಕುಳಿತು ಮಾತಾಡಲಿಕ್ಕೇ ಕಷ್ಟವಾಗಿದೆ.

ಶೀನಪ್ಪ—ಹೊಗೆಂದು ಬಾಯಿಬಿಟ್ಟು ಹೇಳಬಾರದೇ? ಏನೇನೋ ಕುಂಟು ನೆವ ಹುಡುಕುತ್ತೀಯಲ್ಲ. ನೋಡಿದೆಯಾ [illegible]! ನಾನಂತೂ ನೀನು ಹೇಳಿದಂತೆಯೇ ಬರೆದು ಹಾಕಿ ಬಿಡುತ್ತೇನೆ. ಅದರಲ್ಲಿಷ್ಟೂ ಹೆಚ್ಚು ಕಡಿಮೆ ಮಾಡಲಿಕ್ಕಿಲ್ಲ. ಇರಲಿ, ನೀನೂ ಏಳು. [illegible] ಅಮ್ಮನೂ ನಿನ್ನ ಕಾಯಿಲೆಗಾಗಿ ದುಃಖಿಸುತ್ತಿದ್ದಾರೆ. ಇದ್ದುದರಲ್ಲಿ [illegible] ನೀನೂ ಧೈರ್ಯತಂದುಕೊಂಡು ಔಷಧ ಪಥ್ಯಗಳನ್ನು ತೆಗೆದು[illegible].

ಗಿರಿ—(ಒಮ್ಮೆ ನಿಟ್ಟುಸಿರಿಟ್ಟು [illegible]) ಶೀನು, ನೀನು ನಿನ್ನ ಕೆಲಸ ನೋಡಲು ಹೋಗಿನ್ನು. ನಾನೇನೂ [illegible]ದ ಹುಡುಗಿಯಲ್ಲ. ಹೆತ್ತವರಿಗೇಕೆ ದುಃಖಕೊಡಲಿ? ಹೋಗುತ್ತೇನೆ. (ಎಂದು ಎದ್ದು ನಿಂತಳು)

ಶೀನಪ್ಪನೂ ಬೀದಿಯ ಕಡೆಗೆ ಹೊರಟುಹೋದನು. ಗಿರಿಜೆಯೂ ಮನೆಯ ಒಳಗಡೆಗೆ ಹೊರಟು ಹೋದಳು.

---

## II

ರಾತ್ರಿ ೧೨ ಘಂಟೆ ಹೊಡೆದು ಹೋಗಿದ್ದಿತು. ಗಿರಿಜಾ ಗಂಗಾ ಬಾಯಿಯರಿಬ್ಬರೂ ಒಂದೇ ಹಾಸಿಗೆಯಲ್ಲಿ ಮಲಗಿ ಮಾತನಾಡುತ್ತಿದ್ದರು. ಮನೆಯವರೆಲ್ಲರೂ ಮಲಗಿ ಗೊರಕೆ ಹೊಡೆಯುತ್ತಿದ್ದರು. ಗಂಗಾಬಾಯಿಯ ಮಗ್ಗುಲಲ್ಲಿ ೨-೩ ವರ್ಷದ ಮಗು (ಗಂಡು) ವೊಂದು ಮಲಗಿ ನಿದ್ದಿಸುತ್ತಿದ್ದಿತು. ಗಂಗಾಬಾಯಿ ಗಿರಿಜೆಯ ಕೈಗಳನ್ನು ತನ್ನ ಕೈಗಳಿಂದ ಹಿಡಿದು ತಿರುಗಿಸುತ್ತ ಮಾತನಾಡುತ್ತಿದ್ದಳು.

ಗಂಗಾ—ಗಿರಿ, ಯಾಕಿಷ್ಟು ಸೊರಗಿದ್ದೀ? ಏನಾಗಿದೆ ಹೇಳಬಾರದೇ?

ಗಿರಿ—ನನಗೇನಾಗಿದೆ, ಅಕ್ಕಾ. ಏನೇನೂ ಆಗಿಲ್ಲ.

ಗಂಗಾ—ಏನೂ ಇಲ್ಲದೆ ಹೀಗೆ ಹೀರಿ ಹಿಂಡಿಯಾಗಿದ್ದಿ ಯಾಕೆ?

ಗಿರಿ—ದೇವರು ಬಲ್ಲ; ನನಗಂತೂ ಕಾಯಿಲೆ ಏನೂ ಇಲ್ಲ.

ಗಂಗಾ—ಕಾಯಿಲೆಯೇನೂ ಇಲ್ಲದೆ ಹೀಗಾಗಲಿಕ್ಕಿಲ್ಲ. ನೀನು ಹೇಳದೆ ಮರೆಮಾಚುತ್ತೀ, ಇದು ಮಾತ್ರವಲ್ಲ. ಮನಸ್ಸಿಗೆ ಏನೇನೋ ಕೊರೆತೆಗಳನೂ ಹಚ್ಚಿಸಿಕೊಂಡು ಕೊರಗಿ ಸೊರಗುತ್ತಿದ್ದೀ. ಆದರಿಂದಲೇ ಹೀಗಾಗಿದೆ.

ಗಿರಿ—ಕೊರತೆಯಾವದಕ್ಕೆ! ಇಲ್ಲದೊಂದು ಹೇಳುತ್ತೀಯಲ್ಲಾ, ಏನೋ ಹವಾ ಕೆಟ್ಟಿರಬಹುದು. ಸ್ವಲ್ಪ ಅಶಕ್ತತೆ ಮಾತ್ರ ಇರುತ್ತದೆ.

ಗಂಗಾ—ದಿನದಿನಕ್ಕೆ ಅಶಕ್ತತೆ ಹೆಚ್ಚಿ ಮೈ ಬಡವಾಗುತ್ತ ಬಂದರೆ ಸಾಲದೇ? ಮತ್ತಿನ್ನೇನಾಗಬೇಕೆನ್ನುತ್ತೀ? ಅದೇ ಕ್ಷಯಕ್ಕೆ ತಿರುಗತ್ತದಲ್ಲವೇನು?

ಗಿರಿ—ಆಗುವುದೆಲ್ಲಾ ಬೇಗ ಬೇಗ ಆಗಿ ಹೋಗಲಿ. ಹೇಗಾದರೂ ಸಂತೋಷವೇ!

ಗಂಗಾ—ಇಷ್ಟು ಉದಾಸೀನವೇಕೆ ಗಿರಿ? ಸುಮ್ಮಸುಮ್ಮನೆ ಜೀವಕ್ಕೆ ಅಪಾಯವುಂಟುಮಾಡಿಕೊಳ್ಳುವುದೇನು?

ಗಿರಿ—ಅಕ್ಕಾ, ನಾನು ಬೇಕೆಂದು ಯಾವ ಅಪಾಯವನ್ನೂ ಉಂಟುಮಾಡಿಕೊಳ್ಳುವುದಿಲ್ಲ. ಭಗವದಿಚ್ಛೆಯಲ್ಲಿದ್ದುದು ನಡೆಯುತ್ತದೆ. ಬೇಡೆಂದರೆ ಬರುವುದು ನಮಿಚ್ಛೆಗೆ ನಿಲ್ಲುವುದಿಲ್ಲ; ಬೇಕೆಂದರೆ ಬರುವುದಿಲ್ಲ. ಇದರಮೇಲೆ

ಇದರ ಮೇಲೆ ಕೆಲಸಕ್ಕೆ ಬಾರದ ವಸ್ತು ಇದ್ದರೂ ಸರಿ, ಹೋದರೂ ಸರಿ, ಅದನು ಕಟ್ಟಿಕೊಂಡು ಹಗಲೂ ರಾತ್ರಿ ಕಾಯ್ದುಕೊಳ್ಳುವುದೇಕೆ ?

ಗಂಗಾ—ಗಿರಿಯ ಮುಖವನೆತ್ತಿ ನೋಡಿದಳು. ಗಿರಿಯ ಕಣ್ಣುಗಳಲ್ಲಿ ನೀರು ತುಂಬಿರುವಂತೆ ಕಾಣುತ್ತಿದ್ದರೂ ಹರಿಯುವಂತಿರಲಿಲ್ಲ. ಮುಖದಲ್ಲಿ ವಿಜಾತೀಯವಾದ ನಗೆಯೊಂದು ತಲೆದೋರುತ್ತಿದ್ದಿತು. ಗಂಗೆಯು ಬೆಚ್ಚಿಬಿದ್ದು ಎದ್ದು ಕುಳಿತು ಕೇಳಿದಳು—

" ಗಿರಿ, ನೀನು ಮರೆಮಾಚುತ್ತಿ ! ನನ್ನಾಣೆ ! ನಿನ್ನ ಮನಸ್ಸಿನಲ್ಲೇನಿದೆಯೆಂದು ಹೇಳು. ಅಪ್ಪನೂ ಅಮ್ಮನೂ ಹಗಲೂ ರಾತ್ರಿ ಅಳುತ್ತಿದ್ದಾರೆ. ಶೀನುವಂತೂ ನಿನಗಾಗಿ ಎಷ್ಟು ವಿಚಾರ ಪಡುತ್ತಾನೆಂದು ಬೇರೆ ಹೇಳುವಂತಿಲ್ಲ. ನೀನಾದರೆ ಯಾವ ಔಷಧವನ್ನೂ ತೆಗೆಯಲಿಕ್ಕಿಲ್ಲವಂತೆ ; ಯಾವ ಪಂಡಿತನಿಗೂ ಕೈ ತೋರಿಸಬೇಕಿಲ್ಲವೆನ್ನುತ್ತೀಯಂತೆ ; ದಿನದಿನಕ್ಕೆ ಆಹಾರ ನಿದ್ರೆಗಳನ್ನೂ ಕಡಮೆ ಮಾಡುತ್ತಿದ್ದೀಯಂತೆ ; ದಿನದಿನಕ್ಕೆ ಆಹಾರ ನಿದ್ರೆಗಳನ್ನು ಮಾಡುತ್ತಿದ್ದೀಯಂತೆ; ಹೀಗೆಲ್ಲಾ ಯಾಕೆ ಮಾಡುತ್ತೀ ? (ಗಂಗೆಗೆ ಮುಂದೆ ಮಾತಾಡಲಾಗಲಿಲ್ಲ.)

ಗಿರಿ—(ನಗೆ ಮೊಗದಿಂದ) ಅಕ್ಕಾ ! ಅನ್ನ ನಿದ್ದೆ ಇವೆರಡೂ ತಾವಾಗಿಯೇ ಬೇಡವಾಗುತ್ತ ಬಂದರೆ ಬಿಟ್ಟು ಬಿಡದೆ ಮತ್ತಿನ್ನೇನು ಮಾಡಬೇಕೆನ್ನುತ್ತಿ ? ದೇಹದಲ್ಲಿ ಔಷಧದ ವೇಗವನ್ನು ತಡೆಯುವ ಶಕ್ತಿಯಿದ್ದರಲ್ಲವೇ ಔಷಧವನ್ನು ತೆಗೆದುಕೊಳ್ಳುವುದು ?

ಗಂಗಾ—ಹಾಲು ಹಣ್ಣುಗಳನ್ನೇ ತ್ಯಾಗಮಾಡಿಬಿಟ್ಟೆಯಾಕೆ ? ಅದರಿಂದಲಾದರೂ ಇಷ್ಟು ಚೈತನ್ಯವಾಗುತ್ತಿದ್ದಿತಲ್ಲವೆ ?

ಗಿರಿ—ಅಕ್ಕಾ ! ನಿಜವಾಗಿ ಹೇಳುವೆನು ಕೇಳು ; ನನಗೆ ಈ ಪ್ರಪಂಚವೇ ಬೇಸರವಾಗಿ ಹೋಗಿದೆ ! ಯಾವುದೂ ನನಗೆ ಬೇಡವಾಗಿರುವುದರಿಂದ ಎಲ್ಲವನ್ನೂ ಬಿಟ್ಟು ಕೊಟ್ಟಿರುತ್ತೇನೆ.

ಗಂಗಾ—ಹಾಗಿದ್ದರೆ ನಿನಗೆ ಬೇಕಾಗಿರುವದಾದರೂ ಏನು ?

ಗಿರಿ—ನನಗೆ ಬೇಕಾಗಿರುವುದು ಆ ದಯಾಮಯನ, ಆ ಶರಣಾಗತವತ್ಸಲನ ಭಕ್ತಪರಾಧೀನನ ಸಾನ್ನಿಧ್ಯವೊಂದೇ ! ಆತನ ಅಪಾರವಾದ ದಯೆಯೊಂದೆ ನನಗಿನ್ನು ಬೇಕಾಗಿರುವುದು.

ಗಂಗಾ—ವಿಚಾರ ಮಾಡು, ಗಿರಿ ! ಹೆತ್ತತಾಯಿ ತಂದೆಯವರು ಒಂದು ಕಡೆ, ಸತಿಯ ಸರ್ವಸ್ವವಾದ ಪತಿ ಮತ್ತೊಂದು ಕಡೆ, ಉಳಿದವರ ಮಾತಿರಲಿ, ಇವರನ್ನು ಬಿಟ್ಟು ಹೀಗೆ ಆತ್ಮಘಾತ ಮಾಡಿಕೊಳ್ಳಬೇಕೆಂದರೆ ಪರಮಾತ್ಮನಾದರೂ ಅನುಕೂಲನಾದಾನೆಂದಿರುವೆಯಾ ?

ಗಿರಿ—ಅಕ್ಕಾ ! ನಾನು ಆತ್ಮಘಾತ ಮಾಡಿಕೊಳ್ಳಲಿಲ್ಲ. ವಂಚಿಸಲಿಲ್ಲ. ಕೇವಲ ತಾಯಿತಂದೆಯವರಿಗೆ ದುಃಖವಾಗುವುದು ನಿಜ ; ಆದರೆ ಮಕ್ಕಳ ನಿತ್ಯರೋಗವನ್ನು ನೋಡುವುದಕ್ಕಿಂತ ಅದರ ವಿಯೋಗವನ್ನು ಸಹಿಸುವುದು ಒಂದು ವಿಧದ ಸಮಾಧಾನದ ಸಂಗತಿ ; ಇದರ ಮೇಲೆ ಯಾವ ಕೆಲಸಕ್ಕೂ ಒದಗದ ಕಟ್ಟೆಯೊಂದು ಕಳೆದು ಹೋದರೆ ಉಳಿದ ಮಕ್ಕಳಿಂದಲಾದರೂ ಸುಖ ಸಮಾಧಾನವೇ ಆದೀತು.

ಗಂಗಾ—ಹಾಗೆಂದರೆ ನಿನ್ನ ಸ್ವಾಮಿಗೆ ಏನೆನುತ್ತಿ ! ?

ಗಿರಿ:—(ನಕ್ಕು) ಅವರಿಗೆ ನಾನೇನು ಹೇಳಬೇಕು. ಅವರ ಮನಸ್ಸಮಾಧಾನಕ್ಕೆ ಅವರ ಸುತ್ತ ಮುತ್ತಲೂ ಯಥೇಷ್ಟ ಸಾಮಗ್ರಿಯಿದೆ. ಇದರ ಮೇಲೆ ಅವರೀಗ ನನ್ನವರಾಗಿಲ್ಲ. ನನ್ನದಲ್ಲದ ಒಡವೆಯನ್ನು ಕುರಿತು ನಾನು ವಿಶೇಷ ಅಭಿಮಾನ ಹಚ್ಚಿಸಿಕೊಳ್ಳುವುದೂ ಸರಿಯಲ್ಲ.

ಗಂಗಾ—ತಡಿ ತಡಿ, ಗಿರಿ, ನಿನಗೇನೂ ಹುಚ್ಚು ಹಿಡಿದಿಲ್ಲವಷ್ಟೆ ? ಏನೆಂದೆ? ನಿನ್ನಪತಿ ನಿನ್ನ ಒಡವೆಯಾಗದೆ ಮತ್ತಾರ ಒಡವೆ?

ಗಿರಿ—ನನ್ನಪತಿ, ನನ್ನಗುರು, ನನ್ನಸ್ವಾಮಿ ಎಲ್ಲವೂ ನಿಜ. ಜನ್ಮ ಜನ್ಮಾಂತರಕ್ಕೂ ಇದು ಸಿದ್ಧವಾದ ಮಾತು. ಕೇಳು, ಅಕ್ಕಾ! ಅವರು ನನಗೆ ಸ್ವಾಮಿ-ಪತಿ, ಆದರೂ ಅವರು ಈಗ ನನ್ನ ಒಡವೆಯಲ್ಲ. ಅವರು ನನ್ನ ಅಕ್ಕನ ಒಡವೆ, ಅಕ್ಕನವರದಾಗಿಯೇ ಇರಬೇಕೆಂಬುದು ನನ್ನ ಇಷ್ಟ. ಯಾಕೆನ್ನುತ್ತೀ? ಆಕೆಯಂತೆ ನಾನವರನ್ನು ಉಪಚರಿಸಲು ಶಕ್ತಳಾಗಿಲ್ಲ. ಯೋಗ್ಯತೆಯೂ ಇಲ್ಲ. ಶ್ರಮಸಹಿಷ್ಣುತೆಯಂತೂ ನನಗಿಲ್ಲವೇ ಇಲ್ಲ.

ಗಂಗಾ—ಅದ ಮಾತ್ರಕ್ಕೇ ನಿನ್ನ ಒಡವೆಯಲ್ಲವೆನ್ನುತ್ತೀ-ಹೇಗೆ? ನೀನು ಬೇಕೆಂದರೆ ನಿನ್ನದಾಗಲಿಕ್ಕಿಲ್ಲವೇನು?

ಗಿರಿ—ಅಕ್ಕಾ! ನಾನೇ ಬೇಕೆಂದು ಹಟ ತೊಟ್ಟರೆ ಆಗದಲ್ಲ. ಆದರೆ ನಾನೊಲ್ಲೆ, ಹಟಹಿಡಿಯಲೊಲ್ಲೆ! ಆಕೆಗೆ ಬಾಧ್ಯತೆ ಹೆಚ್ಚು. ನ್ಯಾಯವಾಗಿ ಮೊದಲು ಅವಳದಾದ ಒಡವೆಯನ್ನು ನಾನು ನನ್ನದಾಗಿ ಮಾಡಿಕೊಳ್ಳಬೇಕೆನ್ನುವುದು

ದುರಾಶೆ. ಒಂದುವೇಳೆ ನಾನೂ ಆ ಒಡವೆಯನ್ನು ಧರಿಸಿ ಅಷ್ಟಿವಷ್ಟಾಗಿ ಸುಖಿಸ ಬಹುದು. ಅಷ್ಟು ಮಾತ್ರದ ಹಕ್ಕು ನನಗೂ ಇರಬಹುದು ಾದರೆ ಒಂದೇ ಒಡವೆ, ಒಮೆಗೇ ಇಬ್ಬರಿಗೂ ಸರಿಯಾಗಿ ಒಪ್ಪಿರಬೇಕೆಂದರೆ ಆದೀತೇ ? ಆದ್ದರಿಂದಲೇ ನಾನು ಆ ನನ್ನ ಪರವಸ್ತುವಿನ ಶ್ರೇಯಸ್ಕಾಮನೆಯಲ್ಲಿ ಮಾತ್ರ ಮನಸ್ಸಿಟ್ಟುಉಳಿದ ಎಲ್ಲಾ ಭಾಗವನ್ನೂ ಆ ನನ್ನ ಅಕ್ಕನಿಗೇ ಬಿಟ್ಟು ಕೊಟ್ಟಿದ್ದೇನೆ. ಚಿರಕಾಲ ಆಕೆ, ಪತಿಸೇವಾ ಸುಖನನ್ನು ಅನುಭವಿಸುತ್ತಿರಲೆಂದೂ ಹಾರೈಸುತ್ತೇನೆ.

ಗಂಗಾ—ನಿನಗೆ ಅದರಿಂದ ಬಂದ ಭಾಗ್ಯವೇನು?

ಗಿರಿ—ನನಗೆ ನನ್ನಸ್ವಾಮಿ, ನಿಶ್ಚಿಂತರಾಗಿ ಕರ್ತವ್ಯತತ್ಪರರಾಗಿ ಸುಖದಲ್ಲಿರುವರೆಂದು ಕೇಳಿ ತಿಳಿದು ಆನಂದಿಸುವ ಭಾಗ್ಯವೇ ಪರಮ ಸೌಭಾಗ್ಯ. ಆಪರಾತ್ಮಕನ, ಸ್ವಾಮಿಗೂ ಸ್ವಾಮಿಯಾದವನ ಅನುಗ್ರಹ ಲಾಭವನ್ನುಪಡೆಯುವುದೇ ಪರಮಭಾಗ್ಯ.

ಗಂಗಾ—ಪತಿಯ ಇಷ್ಟಕ್ಕೆ ವಿರುದ್ಧವಾಗಿ ನಡೆದು ನೀನು ಪರಮಾತ್ಮನು ಅನುಗ್ರಹವನ್ನು ಪಡೆಯತಕ್ಕವಳೇನು?

ಗಿರಿ—ಹರಿಹರಿ! ಅಕ್ಕಾ ! ಪತಿಯ ಇಷ್ಟಕ್ಕೆ ವಿರೋಧವಾಗಿ ನಾನು ನಡೆಯತಕ್ಕವಳೆಂದಿಗೂ ಅಲ್ಲ. ಅವರ ಇಷ್ಟಕ್ಕೆ ಅನುಸಾರವಾಗಿಯೇ ನಡೆಯುತ್ತಿದ್ದೇನೆಂಬುದು ಆ ಸರ್ವ ಸಾಕ್ಷಿಗೇ ಗೊತ್ತು.

ಗಂಗಾ—ಎಂದರೆ, ಸರ್ವಸಂಗ ಪರಿತ್ಯಾಗ ಮಾಡಿ, ಪರಮಾತ್ಮನಲ್ಲಿ ಸೇರಿ ಹೋಗುವಂತೆ ಪ್ರಾಯೋಪವೇಷ ಮಾಡಬೇಕೆಂದು ನಿನ್ನ ಪತಿ ಹೇಳಿದ್ದಾನೇನು ?

ಗಿರಿ—ಅಕ್ಕಾ, ನೀನು ಇಲ್ಲವೆಂದು ವಿಪರೀತಾರ್ಥವನ್ನು ಕಲ್ಪಿಸಿಕೊಂಡು ನನ್ನನ್ನು ತಿರಸ್ಕರಿಸುತ್ತಿದ್ದೀ !

ಗಂಗಾ—ಮತ್ತೇನು ಮಾಡಲಿ ? ನಿನ್ನ ಪತಿ ನಿನಗೆ ಹೇಳಿದ್ದುದೇನು ? ಆತನು ಹೇಳಿದ್ದ ಕೆಲಸಗಳೆಲ್ಲವೂ ನಿನ್ನಿಂದ ಎಷ್ಟೆಷ್ಟು ಮಟ್ಟಿಗೆ ನಿರ್ವಹಿಸಲ್ಪಟ್ಟಿವೆ ? ಅತನ ಮಾತು ನಿನ್ನಿಂದ ಎಷ್ಟು ಮಟ್ಟಿಗೆ ಪಾಲಿಸಲ್ಪಟ್ಟಿದೆ. ಹೇಳಿಯಾದರೂ ಹೇಳು !

ಗಿರಿ—ಅಕ್ಕಾ ! ಅವರು ಅನುಗ್ರಹರೂಪವಾಗಿ ನಿರೂಪಿಸಿದ್ದ ಕೆಲಸಗಳಲ್ಲಿ ನನ್ನ ಒಬ್ಬಳಿಂದ ಸಾಧ್ಯವಾದಷ್ಟು ಮಟ್ಟಿಗೆ ನಾನು ಮಾಡಿದ್ದೇನೆ. ಇತರರ ಕಡೆಯಿಂದ ಮಾಡಿಸಬೇಕಾಗಿದ್ದುದನ್ನೂ ಮಾಡಿಸಿರುತ್ತೇನೆ.

ಆದಷ್ಟೂ ಶಕ್ತಿವಂಚನೆಯಿಲ್ಲದೆ, ವಾಕ್ಯಪರಿಪಾಲನೆ ಮಾಡಿದ್ದೇನೆ. ಇನ್ನೂ ನನ್ನಿಂದ ಯಾವ ಕೆಲಸವೂ ಸಾಗುವಂತಿಲ್ಲ. ದೈವವಿಲಾಸವೂ ಹಾಗೆಯೇ ಇದೆ ಯೆನ್ನಬೇಕು. ಅಲ್ಲದೆ ಅವರು ಜಗುಪ್ಸೆ ಹೊಂದಿ ನಿಗ್ರಹರೂಪವಾಗಿ ನಿರೂಪಿಸಿರುವ ಅಪ್ಪಣೆಗಳು ನನಗೆ ಈಗ ಪಾಲನೀಯಗಳಾಗಿವೆ. ಇನ್ನು ನನ್ನ ಮುಂದಿನ ಅಲ್ಪಾಯುಷ್ಯದ ಕಡೆಗಾಲ (ಅಂತ್ಯ) ದಲ್ಲಿಯಾದರೂ ನನ್ನ ಮೊದಲಿನ ಸ್ಥಿತಿಗೆ ಬಂದು ಆ ಪರಾತ್ಪರನಾದ, ದೀನನಾಥನಾದ ರಾಧಾನಾಥನಲ್ಲಿ ಲೀನ ಹೊಂದಿ ನಲಿಯ ಬೇಕೆಂಬದೊಂದೇ ಆಶೆ ನನಗೀಗ ಬಲವಾಗಿದೆ. ಇನ್ನು ಮುಂದೆ ನನ್ನಿಂದ ನನ್ನ ಸ್ವಾಮಿಗೆ ಅಲ್ಪ ಸ್ವಲ್ಪ ಮಟ್ಟಿಗಾದರೂ ಸಹಾಯವಾಗುವುದೆಂಬ ಆಶೆ, ನಾನು ಮಾಡಿಕೊಡುವೆನೆಂಬ ಭರವಸೆ, ನನಗಿಲ್ಲವಾದಮೇಲೆ ನಾನು ಅವರ ಮನಸ್ಸನ್ನು ನನ್ನ ಕಡೆಗೆಳೆದುಕೊಳ್ಳುವ ಹವ್ಯಾಸಕ್ಕೇಕೆ ಬೀಳಲಿ ? ಅವರು ಇರುವ ಕಡೆಯಲ್ಲಿಯೇ ತಮ್ಮನ್ನೇ ಏಕನಿಷ್ಠೆಯಿಂದ ಸೇವಿಸುತ್ತಿರುವ ಪತ್ನೀಪುತ್ರ ಪರಿವಾರಗಳ ಮನಸ್ಸಿಗೆ ಆಪ್ಯಾಯನವಾಗುವಂತೆ ಸುಖದಲ್ಲಿಟ್ಟಿರೆಂದು ಪರಮಾತ್ಮನಲ್ಲಿ ಪ್ರಾರ್ಥಿಸುತ್ತೇನೆ. ಅಕ್ಕಾ ! ಇದೇನೂ ಆಕ್ರೋಶದಿಂದಾಡುವ ಮಾತಲ್ಲ ; ವಂಚನೆಯ ನುಡಿಯಲ್ಲ. ಮನಸ್ಸಾಕ್ಷಿಯಿಂದಾಡುವ ಸಮಾಧಾನಪೂರ್ವಕವಾದ ಮಾತು.

ಗಂಗಾ—ಆದರೆ, ಶೀನಪ್ಪನಿಗೆ ಆತನು ಬರೆದ ಪತ್ರಕ್ಕೆ ನೀನು ಅಷ್ಟೊಂದು ನಿಷ್ಠುರವಾದ ಉತ್ತರವನ್ನು ಕೊಡಹೇಳಿದಿಯಾಕೆ ?

ಗಿರಿ—ಅವರು ನನ್ನ ಸ್ವಭಾವವನ್ನು ಚನ್ನಾಗಿ ತಿಳಿದೂ, ಸಿಟ್ಟಾಗಿರುವೆನೆಂದು ಆರೋಪಿಸಿ ಉದಾಸೀನ ಭಾವವನ್ನು ತೋರಿಸಿದುದರಿಂದ ! ಅಷ್ಟೇ ಅಲ್ಲ. ಕಾಗದವನ್ನು ಓದಿದ ಒಡನೆ ಏನೋ ಒಂದು ವಿಧವಾದ ಯಾತನೆಯೂ ಉಂಟಾಯಿತೆನ್ನು ! ಅದರ ವೇಗವನ್ನು ಹತೋಟಿಗೆ ತರುವುದಕ್ಕೆ ಮೊದಲೇ ಹೇಳಿದ ಮಾತದು. ಅದರಿಂದೇನಾಯ್ತೆನ್ನುತ್ತೀ ?

ಗಂಗಾ—ಹಾಗಾದರೆ ನೀನು ನಿನ್ನ ಸ್ವಾಮಿಯಲ್ಲಿ ಅಪರಾಧಿನಿಯಾಗಿದ್ದೀಯಷ್ಟೆ ? ಪತ್ರಮುಖೇನ ಕ್ಷಮಾಯಾಚನ ಮಾಡಿ, ಆತನನಿಲ್ಲಿಗೆ ಬರಮಾಡಿಕೊಂಡು ಮನಸ್ಸಿನ ರೋಗವನ್ನು ಮೊದಲು ಹೋಗಲಾಡಿಸಿಕೋ. ಆ ಬಳಿಕ ತನ್ನಿಂದ ತಾನೇ ಶರೀರ ರೋಗವು ಹೋಗುವುದು.

ಗಿರಿ—ಆಗಲಿ, ಈಗಲೇ ಅವರನ್ನಿಲ್ಲಿಗೆ ಬರಮಾಡಿ ಅವರ ಕೆಲಸಕಾರ್ಯಗಳಿಗೆ ನಾನ್ಯಾಕೆ ವಿಘಾತ ಮಾಡಬೇಕು ? ಸಮಯ ಬಂದಾಗ ಹಾಗೆಯೇ ಮಾಡುತ್ತೇನೆ. ಈಗಂತೂ ನಾನು ರಾಧಾನಾಥನನ್ನು ನೋಡಬೇಕೆಂಬ ತವಕದಲ್ಲಿರುತ್ತೇನೆ.

ಗಂಗಾ—ನೋಡು, ಗಿರಿ ವಿಚಾರಮಾಡಿನೋಡು. ನಾನಂತೂ ಹೇಳಿದ್ದೇನೆ. ಹೇಗೂ ನೀನು ಆತ್ಮಘಾತ ಮಾಡಿಕೊಳ್ಳಬಾರದು. ಇಷ್ಟುದೂರ ನಿನ್ನ ಬಳಿಯಲ್ಲಿ ಹೇಳಿ ಕೇಳಲು ಯಾರಿಗೂ ಧೈರ್ಯವಿಲ್ಲ. ನಾನೂ ಅದಕ್ಕಾಗಿಯೇ ಇಲ್ಲಿಗೆ ಬಂದೆನು. ನಿನ್ನ ಸ್ವಭಾವವನ್ನು ತಿಳಿದು ಅಭಿಮಾನವು ನಿನಗೆ ಅತಿಯಾಗಿರುವುದರಿಂದ ಏನಾದರೂ ವಿಪರೀತ ಮಾಡಿಕೊಳ್ಳುತ್ತೀಯೆಂದು ಊಹಿಸಿ, ನಿನ್ನ ಭಾವನವರ ಅನುಮತಿ ಹೊಂದಿ ನಾನಿಲ್ಲಿಗೆ ಬಂದೆನು. ಹೊತ್ತು ಬಹಳವಾಗಿದೆ. ನಿನ್ನೆಯೆಲ್ಲಾ ದಾರಿಯಲ್ಲಿ ಬಂದಿದ್ದರಿಂದ ನಿದ್ದೆಯಿಲ್ಲ. ಈಗ ಕಣ್ಣೆಳೆಯುತ್ತಿದೆ. ನೀನೂ ಮಲಗು. ಎಂದು ಹೇಳುತ್ತಾ ಗಂಗಾಬಾಯಿ ಮುಸಿಕಿಟ್ಟು ಮಲಗಿಬಿಟ್ಟಳು.

ಗಿರಿಜಾ ಬಾಯಿಯೂ ಸಲ್ಪ ಹೊತ್ತು ಸುಮ್ಮನೆ ಮಲಗಿದ್ದು ಎದ್ದು ಕುಳಿತು ಏನೇನನ್ನೋ ಆಲೋಚಿಸಿ ಪತ್ರವನ್ನು ಬರೆಯುತ್ತ ಕುಳಿತಳು. ಯಾರಿಗೆ ? ಗವೀಪುರದ ಆರ್ಯಮಹಿಳಾ ಮಂಡಲಿಯ ಕಾರ್ಯದರ್ಶಿನಿಗೆ.

(ಪತ್ರವು ಹೀಗೆ ಬರೆಯಲ್ಪಟ್ಟಿದ್ದಿತು.)

ಸಹೋದರಿ !

ನಿನ್ನ ಕಾಗದವು ಕೈ ಸೇರಿತು ನಾನು ಅಸ್ವಸ್ಥತೆಯಲ್ಲಿರುವುದೇನೋ ನಿಜ. ಅಸ್ವಸ್ಥತೆಯೆಂದರೆ ಅಶಕ್ತತೆಯೊಂದು ಹೊರತು ಉಳಿದ ಕಾಯಿಲೆಯೇನೂ ಇಲ್ಲ. ಅಶಕ್ತತೆಯಿಂದ ನಿದ್ರಾಹಾರಗಳೂ ಅಷ್ಟಕ್ಕಷ್ಟಕ್ಕೆ ಆಗಿದೆ.

ತಂಗಿ ಒಂದರೆಡುಗಳಿಗೆಯ ಪರಿಚಯವಾದರೂ ಅದರ ಅಗಲುವಿಕೆಯಿಂದ ಮನಸ್ಸು ಯಾರಿಗಾದರೂ ಅಧೀರವಾಗುತ್ತದೆ. ಅಂತಹದರಲ್ಲಿ ಅಖಂಡ ನಾಲ್ಕಾರು ವರ್ಷಗಳ ಏಕತ್ರವಾಸದ ನಿಕಟಸ್ನೇಹ ಸಂಬಂಧದಲ್ಲಿ ಬದ್ಧರಾಗಿದ್ದು ಅಗಲಿದರೆ ಪರಸ್ಪರರಿಗೆ ದುಃಖವಾಗುವುದೇನೂ ಅತಿಶಯವಲ್ಲ. ನಿಮಗಾಗಿರುವಂತೆಯೇ ನನ್ನ ಒಡನಾಡಿಯರೆಲ್ಲರನ್ನೂ ಬಿಟ್ಟು ಬಂದುದು ನನಗೂ ದುಃಖವಾಗದಿರುವುದಿಲ್ಲ. ಪರಸ್ಪರ ಸೋದರಿಯರಾದ ನಾವು ಹೀಗೆ ಅಗಲಿರುವದು ಕಿಂಚಿತ್ ತಾಪದಾಯಕ ಸಂಗತಿಯಾದರೂ ಧರ್ಮ ಕರ್ತವ್ಯಗಳಿಗೆ ಅಧೀನರಾದ ನಮಗದು ಸಾಧಾರಣವಾಗಿ ಉಂಟಾಗುವಂತಹದೇ ! ಆದುದರಿಂದ ಆ ವಿಚಾರದಲ್ಲಿ ಕಳವಳಪಡ ಬಾರದು.

ನನ್ನ ಕಾಯಿಲೆಗಾಗಿ ನೀವು ದುಃಖಪಡುವುದು ಕೂಡ ಅಷ್ಟೇ ಲಾಭದಾಯಕ ವಿಚಾರ, ನಿರರ್ಥಕ ಚಿಂತೆಗೆಡೆ ಗೊಡ ಬಾರದೆಂಬುದೇ ನನ್ನ ಕೋರಿಕೆ. ಎಲ್ಲವೂ ದೈವೇಚ್ಛೆಗೊಳಪಟ್ಟಿರುವುದು ಇರಲಿ.

ಸಮಾಜದ ಕೆಲಸವು ತೃಪ್ತಿಕರವಾಗಿ ನಡೆವಿಲ್ಲವೆಂದರೆ ಅಭಿಪ್ರಾಯವಾಗಲಿಲ್ಲ. ಮುಂದಾಗಿ ನುಗ್ಗಿ ಕೆಲಸ ಮಾಡುತ್ತಿರುವದು ಕೆಲವರು, ಕಾರ್ಯಾಂತರದಿಂದ ಏನಾದರೂ ಬೇರೆ ಕಡೆಗೆ ಹೋದರೆ ಉಳಿದವರಾರೂ ಅವರು ಮಾಡುತ್ತಿದ್ದ ಕೆಲಸವನ್ನು ಮಾಡಲಾಗದೇ? ತನಗೆ ಶಕ್ತಿಯಿಲ್ಲವೆಂದೋ ತನಗೆ ಬುದ್ಧಿ ಸಾಲದೆಂದೋ ನನಗೆ ಅನುಭವವಿಲ್ಲವೆಂದೋ ತಮ್ಮತಮ್ಮಲ್ಲಿಯೇ ಹೇಳಿ ಕೊಳ್ಳುತ್ತಲಿದ್ದರೆ ಸಮಾಜದ ಕೆಲಸವಾದರೂ ಹೇಗೆ ನಡೆಯಬೇಕು? ಸ್ತ್ರೀ ಸಮಾಜದ ಘನತೆ, ದಕ್ಷತೆ ಸನ್ಮಾನಗಳನ್ನು ಸರ್ವ ಪ್ರಕಾರದಿಂದಲೂ ಕಾಪಾಡಿಕೊಳ್ಳಲು ಪ್ರಯತ್ನಮಾಡದಿದ್ದರೆ ಸಮಾಜವು ತೃಪ್ತಿಕರವಾಗಿರುವುದೇ? ಸಮಾಜದಲ್ಲಿ ಗುಣಕ್ಕೆ ಬೆಲೆಯೂ ತಿಳಿವಿಗೆ ಮೇಲೆಯೂ ದೊರೆವಂತೆ ಇರಬೇಕು. ಜ್ಞಾನ, ಸದ್ಗುಣ, ಸದಾಚರಣಗಳಿಗೆ ಅಗ್ರ ಮರ್ಯಾದೆ ಇರಬೇಕು. ಹೀಗಿಲ್ಲದೆ ಸಿರಿವಂತಿಗೆ ಹಿಗ್ಗಿ ಪಕ್ಷಪಾತ ಮಾಡುವುದಾದರೆ ಅದು ಉರ್ಜಿತವಾಗಲಾರದು. ಹೊಸದಾಗಿ ಬರುವ ಅಧಿಕಾರಸ್ಥರನ್ನೋ ಸಿರಿವಂತರನ್ನೋ ಆದರಿಸುವ ಹವಣಿಕೆಯಲ್ಲಿ ಸಮಾಜದ ಆಧಾರದಂತಿರುವಂತಹ ಸಾಮಾನ್ಯರನ್ನು ಮಾತ್ರ ಹೇಗೂ ಉಪೇಕ್ಷಿಸಬಾರದು. ಇಂತಹ ಸಂದರ್ಭದಲ್ಲಿ ಅವರನ್ನು ತಮ್ಮ ಕಾರ್ಯಕ್ಕೆ ಸಹಾಯಕರಾಗಿರುವಂತೆ ತೋರಿ ಅವರ ಸಾನುಭೂತಿಯಿಂದ ಆಗಂತುಕರನ್ನು ಸತ್ಕರಿಸಲು ಸಿದ್ಧರಾಗುವುದರಿಂದ ಸಮಾಜದ ಘನತೆ ಹೆಚ್ಚುವುದು. ಹೀಗೆ ಮಾಡದೆ ಪಕ್ಷಪಾತ, ಪಂಕ್ತಿಭೇದಗಳನ್ನು ಮಾಡಿಯೇ ಕೆಲವು ಸಂಘಗಳು ಅವನತಾವಸ್ಥೆಗಿಳಿದಿರುವವು. ನಿಮ್ಮ ಸಮಾಜವಾದರೂ ತನ್ನ ಹೆಸರನ್ನು ಸಾರ್ಥಕ ಪಡಿಸಿಕೊಳ್ಳಲೆಂದು ನನ ಆಶೆ.

ಸಮಾಜಕ್ಕೆ ಮೊದಲಿನಂತೆ ಮಹಿಳೆಯರು ಬಾರದೆ ಉದಾಸೀನರಾಗಿರುವುದಕ್ಕೆ ಕಾರಣಗಳೂ ಇವೆ. ಪ್ರಾರಂಭದಿಂದಲೂ ಅಲ್ಲಿಗೆ ಅತ್ಯಾಸಕ್ತಿಯಿಂದಲೂ ಕ್ರಮದಿಂದಲೂ ಬರುತ್ತಿದ್ದವರು ಕೆಲವರು; ಪ್ರತಿಷ್ಠಾಕಾಮಿಗಳಾಗಿ ಬರುತ್ತಿದ್ದವರು ಇನ್ನು ಕೆಲವರು; ಬಾಹ್ಯಾಡಂಬರದಲ್ಲಿ ಅಭಿಪ್ರಾಯವಿರದಿದ್ದರೂ ಸಮಾಜದ ಏಳಿಗೆಗಾಗಿ ಶಕ್ತಿ ವಂಚನೆಯಿಲ್ಲದೆ ಸಹಕರಿಸುವ ಸದುದ್ದೇಶದಿಂದ ಮನೆಗೆಲಸಗಳಲ್ಲಿ ತೊಡಕಿಕೊಂಡಿದ್ದರೂ ಅವಕಾಶವಾದಾಗಲೆಲ್ಲಾ ತಪ್ಪದೆ ಬರುತ್ತಿದ್ದ

ವರು ಮತ್ತೆ ಕೆಲವರು. ಒಂದು ಸಮಾಜದ ಉತ್ಕರ್ಷವನ್ನು ನೋಡಿ ಸಹಿಸಲಾ ರದೆ ತಾವು ಅಭಿಮಾನ ಪಡುವ ಮತ್ತೊಂದು ಸಂಘದ ಪ್ರತಿಷ್ಠೆಗಾಗಿ ಇಂಥ ಸಮಾಜವನ್ನು ಅವನತಾವಸ್ಥೆಗೆ ತರುವ ಹವಣಿಕೆಯಲ್ಲಿ ನಿಂತು ಅದಕ್ಕಾಗಿ ಸಮ ಯನೋಡಲು ಬರುತ್ತಿದ್ದವರು ಇನ್ನು ಕೆಲವರು. ಹೀಗೆ ಬೇರೆ ಬೇರೆ ಪಂಗಡಗಳಿಗೆ ಸೇರದವರಿರುವುದರಿಂದ ಅವರಲ್ಲಿ ಮೊದಲಿನವರು ಬಾರದೆ ನಿಂತರೆ ಅವರು ರೋಗ ಅಥವಾ ಇತರ ಅನನುಕೂಲಗಳಿಗಾಗಿ ಬಾರದಿರಬಹುದೆಂದೋ ಅವರ ಮನಸ್ಸಿಗೆ ಹತ್ತುವಂತಹ ಆಚರಣೆಗಳು ಕಾರ್ಯನಿರ್ವಾಹಕರಿಂದ ನಡೆಯಲ್ಪಟ್ಟಿದ್ದು ಅದಕ್ಕಾಗಿ ಅವರು ತಟಸ್ಥರಾಗಿರಬಹುದೆಂದೋ ಹೇಳಬೇಕು.

ಎರಡನೆಯವರಿಗೆ, ಆರ್ಯನಾರಿಯರ ಮುಖ್ಯಧನವಾದ ವಿಧೇಯತಾ (ಲೀನತಾ) ಶ್ರಮಸಹಿಷ್ಣುತಾ ಕರ್ತವ್ಯ ತತ್ಪರತಾ ಗುಣಗಳಿಗೆ ವಿರೋಧವಾದ ವಿ ಚಾರಗಳಂ ಸಂಘದಲ್ಲಿ ದೃಗ್ಗೋಚರವಾಗಿ, ಇಲ್ಲವೆ ಶ್ರುತಿಗೋಚರವಾಗಿ ಅದರಿಂದ ಅವರು ಬರುವುದನ್ನು ನಿಲ್ಲಿಸಿರಬಹುದು. ಮೂರನೆಯ ವರ್ಗದವರಂತೂ ಉತ್ಸವ ಸಮಾರಂಭ ಕಾಲಗಳಲ್ಲಿಯೇ ವಿಶೇಷವಾಗಿ ಕಾಣಿಸಿಕೊಳ್ಳುವುದರಿಂದ ಅವರು ಸಾಮಾನ್ಯವಾಗಿ ಬರುವಂತಹರಲ್ಲನೆಂದೇ ಹೇಳಬಹುದು. ನಾಲ್ಕನೆಯವರು, ಒಂದು ಎರಡನೆಯವರ ಬರುವಿಕೆ ತಪ್ಪಿ ಸಮಾಜದಲ್ಲಿ ಅವ್ಯವಸ್ಥೆಗಳೂ ಅಜಾಗರೂ ಕತೆಗಳೂ ತಲೆದೋರಿದುವೆಂದರೆ ಮೊದಲೇ ನಾರೀವರ್ಗಕ್ಕೆ ಮುಸುಕಿರುವ ದೌ ರ್ಜನ್ಯಾಪವಾದದ ಹೊರೆಗಾಗಿ ಪರಿತಾಪ ಪಡುತ್ತಿರುವರು. ಇದರಿಂದ ಮತ್ತಷ್ಟು ವ್ಯಥಿತರಾಗಿ ದೂರಸರಿಯುವರು. ಅಯ್ದನೆಯವರಂತು ಇಷ್ಟಾದರೆ ಅವರ ಉದ್ದೇಶ ಸಿದ್ಧಿಯಾಯ್ತೆಂದೇ ತಿಳಿದು ಮೆಲ್ಲಮೆಲ್ಲನೆ ಇಲ್ಲನೊಂದು ನೆವಗಳನ್ನು ಮುಂದಿಡುತ್ತ ದೂರಸಾರುವರು. ತಿಳಿಯಿತೇ ?

ಸೋದರಿ ! ಈ ಕಾರಣಗಳಲ್ಲಿ ಎಲ್ಲವೂ ಸೇರದಿದ್ದರೂ ಒಂದೆರಡಾದರೂ ಆಗದೆ, ಮಹಿಳೆಯರು ಉಪೇಕ್ಷಿಸುವರಲ್ಲ. ಅದೇನೆಂದು ವಿಚಾರಮಾಡಿನೋಡಿ ಆಗಿರುವ ತಪ್ಪನ್ನು ತಿದ್ದಿಕೊಂಡು ಮತ್ತೆ ಕ್ರಮಪಡಿಸುವುದರಿಂದ ಮಹಿಳೆಯರ ಮನಸ್ಸನ್ನು ಒಲಿಸಿಕೊಳ್ಳುವುದು ಅತ್ಯಗತ್ಯವಾದ ಕೆಲಸವು.

ತ್ರೈಮಾಸಿಕ ಸಂಚಿಕೆ ಹೊರಡುವುದು ವಿಳಂಬವಾದರೂ ಚಿಂತೆಯಿಲ್ಲ; ಅದಷ್ಟು ಕಷ್ಟಪಟ್ಟು, ಅದರಲ್ಲಿ ಹೊಲಸು ಹಳಸಲು ನುಡಿಗಳಿಗೆ ಎಡೆಗೊಡದೆ ಆರ್ಯ ನಾರಿಯರಿಗೆ ಅವಲೋಕನ, ಮನನ, ಅನುಷ್ಠಾನಗಳಿಗೆ ಯೋಗ್ಯವಾದ ವಿಚಾರ

ಗಳನ್ನೇ ಆದರಿಸಿ ತೋರಿಸಿ, ಬಾಲೆಯರಿಗೆ ಬುದ್ಧಿ ವಿಕಾಸವಾಗುವಂತಹ ಮಾದರಿ ಶಿಕ್ಷಣವನ್ನೇ ಕೈಕೊಂಡು ಅದನ್ನೇ ಆಚರಣೆಗೂ ತರಬೇಕಲ್ಲದೆ, ಅದಕ್ಕೆ ಸಂಬಂಧಿಸಿದ ವಿಷಯಗಳನ್ನು ವಿಮರ್ಶಿಸಿ ಬರೆದು ಪ್ರಕಟಿಸುವುದೂ ಮುಖ್ಯವು. ಇತರ ಸಂಘ ಸಮಾಜದವರಂತೆ ಸ್ತ್ರೀಸಮಾನಾಧಿಕಾರವೆಂದೂ ಸ್ತ್ರೀ ಸ್ವಾತಂತ್ರ್ಯವೆಂದೂ ಪುನರ್ವಿವಾಹ ಪ್ರೌಢಾವಿವಾಹಗಳೆಂದೂ ಮತಪ್ರದರ್ಶನದ ಪ್ರಜಾ ಪ್ರತಿನಿಧಿತ್ವದ ಅಧಿಕಾರಗಳಿಗೆ ತಾವೂ ಹಕ್ಕುಳ್ಳವರೆಂದೂ ಕುಣಿಯುವ ಸುಧಾರಕಾಗ್ರಣಿಯರೆನ್ನಿಸಿರುವ ಮತ್ತಕಾಶಿನಿಯರ ಅಟ್ಟಹಾಸಕ್ಕೆ ಮಾತ್ರ ನಿಮ್ಮ ಸಮಾಜದಲ್ಲಿ ಸ್ಥಳ ವಿಷ್ಟೂದೊರೆಯದಿದ್ದರೆ ಮಾತ್ರ ನಿಮ್ಮ ಪವಿತ್ರ ಉದ್ದೇಶವು ಇಂದಿಲ್ಲದಿದ್ದರೆ ಮುಂದೆಯಾದರೂ ಸಫಲಹೊಂದಿ ನಿಮ್ಮ ಆರ್ಯ ನಾರೀ ಮಂಡಲಿಯ ನಾಮವು ಅನ್ವರ್ಥವೂ ಆದರ್ಶವೂ ಆಗಿ ಸಾರ್ಥಿಕ್ಯ ಹೊಂದುವುದು.

ಸದ್ಯಕ್ಕೆ ಇಷ್ಟು ಸಾಕು; ಅವಕಾಶವಾದಾಗ ಮತ್ತೆ ಬರೆಯುವೆನು. ಮುಖ್ಯವಾಗಿ ನೀವೆಲ್ಲರೂ ಪ್ರತಿಯೊಬ್ಬರೂ ತಾವು ಸಮಾಜದ ಭದ್ರತೆಯನ್ನು ಕಾಪಾಡಲಿಕ್ಕಾಗಿಯೂ ದೇಶದ ಅಭ್ಯುದಯವನ್ನು ಕಾಣಲಿಕ್ಕಾಗಿಯೂ ಮುಂದಾಗಿ ನಿಂತು ಪಾಡು ಪಡಲಿಕ್ಕಾಗಿ ಹುಟ್ಟಿರುವೆವೆಂದೂ ಭಗವಂತನು ಬೆಂಬಲನಾಗಿದ್ದು ನಮಗಷ್ಟರ ಸಾಮರ್ಥ್ಯವನ್ನಿತ್ತಿರುವದರಿಂದ ನಾವು ಹಿಂದೆ ನಿಂತು ಕರ್ತವ್ಯ ಪರಾಙ್ಮುಖರಾಗದೆ ಶ್ರದ್ಧೆಯಿಂದಲೂ ಉತ್ಸಾಹ, ನಿರ್ವಂಚನೆ ಅಪ್ರಮತ್ತತೆಗಳಿಂದಲೂ ಕೆಲಸ ಮಾಡಬೇಕೆಂದೂ ತಿಳಿದು ಅದರಂತೆ ನಡೆಯುವಿರೆಂದಾಶಿಸುತ್ತೇನೆ. ಭಗವಂತನು ನನ್ನ ಶೇಷಾಯುಷ್ಯದಲ್ಲಿ ಮತ್ತಾವಕಾರ್ಯವನ್ನು ನಡೆಯಿಸುವನೆಂದು ನಾನೀಗ ಹೇಳಲಾರೆ. ಸದ್ಯಃಸ್ಥಿತಿಯಲ್ಲಿ ಮಾತ್ರ ನನ್ನ ಕಾರ್ಯದ ಮತ್ತು ಕಾಲದ ಅವಧಿ ಮುಗಿಯುತ್ತ ಬಂದಿದೆಯೆಂದೇ ನಾನು ಊಹಿಸಬೇಕಾಗಿದೆ. ನಿಮ್ಮ ಸಮಾಜದ ಇತರ ಎಲ್ಲಾ ಸೋದರಿಯರಿಗೂ ನನ್ನ ಕೃತಜ್ಞತೆಯನ್ನು ಸೂಚಿಸಬೇಕೆಂದು ಪ್ರಾರ್ಥಿಸುವೆನು.

ಇಂತಾಶಿಸುವ, ನಿಮ್ಮೆಲ್ಲರ ಶ್ರೇಯಃಕಾಂಕ್ಷಿಣಿ, ಗಿರಿಜಾ. ”

ಗಿರಿಜೆಯು ಪತ್ರವನ್ನಿಂತು ಬರೆದು ಲಕೋಟೆಹಾಕಿ ರವಾನೆಗೆ ಚೀಟಯನ್ನೂ ಹಚ್ಚಿಸಿ ಆ ಬಳಿಕ ಮತ್ತೊಂದು ಪತ್ರವನ್ನು ಬರೆಯಕುಳಿತಳು. ಆದರೆ ಕೈಬರಲಿಲ್ಲ; ಆಲೋಚನೆ ಹುಟ್ಟಿತು. ಏನೆಂದು ಬರೆಯುವುದು ? "ಪಾಪ, ನನಗೇನಾದರೂ ಕಷ್ಟ ಸಂಕಟಗಳೆಂದರೆ ಬರೆದರೆ ಅವರಿಗೆ ಇದ್ದ ಅಭಿಮಾನವೂ ಮರೆಯಾ

ಗುವುದು; ಉದಾಸೀನ ಹೆಚ್ಚುವುದು. ತಿಂಗಳಿಗೊಮ್ಮೆ ಬರೆಯುವವರು. ಆಗ ಬರೆಯುವುದನ್ನೇ ನಿಲ್ಲಿಸುವರು. ಆದ್ದರಿಂದ ಅವರಿಗಿನ್ನು ಎಳ್ಳಷ್ಟೂ ಕಷ್ಟಕೊಡಲೊಲ್ಲೆ; ಸುಖವಾಗಿರಲಿ. ಈಗ ಬರೆಯುವುದೇಬೇಡ. ಶೀನುವೇ ಬರೆಯಲಿ, ಹೊತ್ತು ಮಿತಿಮೀರಿಹೋಗಿದೆ. ಗಂಗಕ್ಕನು ಎದ್ದುನೋಡಿದರೆ ಬೈದಾಳು." ಎಂದು ಮುಸುಕಿಟ್ಟು ಮಲಗಿ ಬಿಟ್ಟಳು.

———

## III.

ಗಂಗಾಬಾಯಿಯು ಬಂದು ಒಂದುವಾರವಾಯಿತು. ಗಿರಿಜಾಬಾಯಿಯ ಮನಸ್ಥಿತಿಯಲ್ಲೇನೂ ವ್ಯತ್ಯಾಸವಾದಂತೆ ಕಾಣಲಿಲ್ಲ. ದೇಹಸ್ಥಿತಿ ಮಾತ್ರ ದಿನ ದಿನಕ್ಕೂ ಕ್ಷೀಣಗತಿಯನ್ನೇ ಹೊಂದುತ್ತಿದೆ. ಸಣ್ಣಕೆಮ್ಮು, ದಮ್ಮು, ಜ್ವರ, ತಲೆಶೂಲೆಗಳು ಯಾವಾಗಲೂ ಇದ್ದುವೆ. ಮಧ್ಯಾಹ್ನ ನಡುರಾತ್ರಿಗಳಲ್ಲಿ ಜ್ವರ ಸ್ವಲ್ಪ ವೇಗವಾಗುತ್ತದೆ. ಅಶಕ್ತತೆ ಬಹಳ. ತಾಯಿತಂದೆ, ಅಕ್ಕತಮ್ಮ-ಇವರ ಮನಸ್ಸಮಾಧಾನ-ಧೈರ್ಯಕ್ಕಾಗಿ ಹಗಲೆಲ್ಲಾ ತನ್ನ ಆಯಾಸವನ್ನೂ ದೇಹದ, ಮನಸ್ಸಿನ ಅಸ್ವಸ್ಥತೆಯನ್ನೂ ಹೊರಪಡಿಸದೆ ಬಹು ಕಷ್ಟದಿಂದ ಸಹಿಸಿಕೊಂಡು ಆದಷ್ಟು ನಗೆಮೊಗದಿಂದ, ಮೆಲ್ಲ ಮೆಲ್ಲನೆ ತಿರುಗಾಡುವುದು, ಸಣ್ಣ ಸಣ್ಣ ಕೆಲಸವನ್ನು ಮಾಡಹೋಗುವುದು, ನಿಧಾನವಾಗಿ ಮಾತನಾಡುವುದು ಹೀಗೆ ಮಾಡುತ್ತಿದ್ದಳು. ಪಂಡಿತರು, ಹಕೀಮರು, ಡಾಕ್ಟರು ಬಂದುನೋಡಿ ರೋಗಮೂಲವನ್ನು ಸರಿಯಾಗಿ ಕಂಡು ಹಿಡಿಯಲಾರದೆ ಹೋದರು. ಕೆಲವರು ಇದು ಕ್ಷಯ ಚಿಹ್ನೆಯೆನ್ನುವರು. ಕೆಲವರು ರಕ್ತಶೋಷಣದಿಂದಾದ ನರಗಳ ದುರ್ಬಲತೆಯೆನ್ನುವರು. ಇನ್ನು ಕೆಲವರು ಮನೋರೋಗವೇ ರೋಗವೆನ್ನಬೇಕಲ್ಲದೆ ಬೇರೇನೂ ಹೇಳುವಂತಿಲ್ಲ, ಆದರೂ ಪಿತ್ತ ವಿಕಾರವೇನೋ ಇದೆ ಎಂದು ಹೇಳುವರು. ಗಿರಿಜೆಯು ಮಾತ್ರ ಬಾಯಿ ಬಿಟ್ಟು ಏನನ್ನೂ ಹೇಳಲೊಲ್ಲಳು. ಒತ್ತಿಯೊತ್ತಿ ಕೇಳಿದಾಗ ಮಾತ್ರ ತನಗೇನೇನೂ ಆಗಿಲ್ಲವೆಂದೂ ಯಾವುದನ್ನೂ ಹೇಳಬೇಕಾದುದಿಲ್ಲವೆಂದೂ ಬರೆ ಅಶಕ್ತತೆ, ಬೆಹಾಸೆಗಳು ಮಾತ್ರ ಹೆಚ್ಚುತ್ತಿವೆಯೆಂದೂ ಮಾತ್ರ ಹೇಳುವಳು. ಮನೆಯವರ ಬಲಾತ್ಕಾರದಿಂದ ಅಲ್ಪ ಸ್ವಲ್ಪ ಆಹಾರವನ್ನು ತೆಗೆದುಕೊಳ್ಳುವಳು. ತಮ್ಮನಾಗಲಿ, ತಂದೆಯಾಗಲಿ, ತಾಯಿ-ಅಕ್ಕಂದಿರಾಗಲೀ ಇದಿರೆ ನಿಂತು ಒತ್ತಿ ಹೇಳಿದಾಗ ಹೊರತು ಉಳಿದ ವೇಳೆಗಳಲ್ಲಿ ಯಾವ ಔಷಧ, ಆಹಾರಗಳನ್ನೂ ತೆಗೆದುಕೊಳ್ಳುವದಿಲ್ಲ. ಒಟ್ಟಿನಲ್ಲಿ, ಗಂಗಾಬಾಯಿ ಬಂದ ಈ ಒಂದು ವಾರದಿಂದ ಈಚೆಗೆ ಗಿರಿಜೆಯ ಮುಖದಲ್ಲಿ ಅಶಕ್ತತೆಯೂ ಜೀವನದಲ್ಲಿ ನೈರಾಶ್ಯವೂ ಎತ್ತಿ ಕಾಣುತ್ತಿ

ದ್ದನೆಂದರೆ ಸಾಕು. ಮೊದಲಿನ ದಿವಸದಲ್ಲಿ ಅನಂತನ ವ್ರತದ 'ಹಬ್ಬ' ವಾದುದರಿಂದ, ಅವಳು ದೇವದೇವನ ಧ್ಯಾನ, ಪೂಜೆ ಇವುಗಳಲ್ಲಿ ಪ್ರತಸ್ಥಳಾಗಿದ್ದು ಸಾಯಂಕಾಲದ ಸಮಯದಲ್ಲಿ ಆಹಾರವಿಷ್ಟನ್ನು ತೆಗೆದುಕೊಂಡುದರಿಂದಲೂ ರಾತ್ರಿಯೆಲ್ಲಾ ಅತಿಯಾದ ಆಯಾಸದಿಂದ, ನಿದ್ದೆ ಬರಲಿಲ್ಲವಾದುದರಿಂದಲೂ ಈದಿನ ಗಿರಿಜೆಗೆ ಜ್ವರವು ದಿನಕ್ಕೂ ಸ್ವಲ್ಪ ಹೆಚ್ಚಾಗಿಯೇ ಬಂದಿದೆ. ಬಲವಾದ ಶಾಖವಾದ ರಜಾಯಿಗಳನ್ನು ಹೊದ್ದು ಹಾಸಿಗೆಯಲ್ಲಿ ಮಲಗಿರುವಳು. ಹೊತ್ತು ಮಧ್ಯಾಹ್ನಾತ್ಪರ ಮೂರುವರೆ ಘಂಟೆ ಸಮಯ. ಗಂಗೆಯು ಮೂರನೆಯ ಜಾವದ ಉಪಾಹಾರ ಪಾನೀಯಗಳಿಗೆ ಸಿದ್ಧಪಡಿಸುತ್ತಿರುವಳು. ಗಿರಿಜೆಯ ಹಾಸಿಗೆಗೆ ಒಂದೆರಡು ಮೊಳದಷ್ಟು ಹತ್ತಿರದಲ್ಲಿ ಅವಳ ತಾಯಿ ಮಲಗಿರುವಳು. ತಂದೆ ತಮ್ಮ ಇವರು ಮನೆಯಲಿಲ್ಲ. ಉಳಿದವರೂ ತಮ್ಮ ತಮ್ಮ ಕೆಲಸದಲ್ಲಿರುವರು. ಈ ವೇಳೆಯಲ್ಲಿ ಗಿರಿಜೆಯು ಚಳಿಯಿಂದ ನಡುಗುತ್ತ ಮಲಗಿದ್ದವಳು, ಅರೆನಿದ್ದೆಯಲ್ಲಿ ಒಂದು ಮನೋಹರವಾದ ಸ್ವಪ್ನ ಸಾಮ್ರಾಜ್ಯದಲ್ಲಿ ಓಲಾಡುತ್ತಿರುವಳು.

## ಸ್ವಪ್ನ.

ಗಿರಿಜೆಯು ಫಲಪುಷ್ಪ ಭರಿತವಾದ ಒಂದು ಉದ್ಯಾನದ ಮಧ್ಯದಲ್ಲಿ ಪುಷ್ಕರಿಣಿಯ ಮೇಲ್ಗಡೆಯಿದ್ದ ಶ್ವೇತ ಶಿಲಾಮಂಟಪದ ಒಂದು ಕಲ್ಲು ಜಗಲಿಯಮೇಲೆ, ಚಿಗುರೆಲೆಗಳ ಹಾಸಿಗೆಯಲ್ಲಿ ಮಲಗಿದ್ದಳು. ಅವಳ ಮೈಯೆಲ್ಲಾ ಬೆಂಕಿಯಲ್ಲಿ ಬೆಂದು ಹೋಗಿದ್ದಂತೆ ಕುದಿಯುತ್ತಿದ್ದಿತು. ತಾಪವು ಅತಿಯಾಗಿದ್ದಿತು. ಹಾರಿಕೊಂಡು ಬಂದು ಇದಿರಾಗಿರುವ ಪುಷ್ಕರಿಣಿಯ ಸುಶೀತಲವಾದ ನೀರಿನಲ್ಲಿ ಮುಳುಗಿಬಿಟ್ಟರೆ ತನ್ನ ದೇಹದ ಆಯಾಸವೆಲ್ಲವೂ ಹೋದೀತೆಂದು ಭಾವಿಸಿದಳು. ಆದರೆ ಏಳಲು ತ್ರಾಣವಿಲ್ಲ. ಕೈಕಾಲುಗಳೇ ಬಿಗಿದು ಕಟ್ಟಿದಂತಾಗಿ ಹೋಗಿದೆ. ತನ್ನ ಆಪ್ತರ ಹೆಸರು ಹಿಡಿದು ಒಬ್ಬೊಬ್ಬರನ್ನಾಗಿ ಕರೆದಳು; ಯಾರೂ ಬರಲಿಲ್ಲ. ಕಡೆಗೆ ಗಿರಿಜೆಗೆ ಅಳು ಬಂದಿತು. ಆಗ ಜ್ಞಾನೋದಯವಾಯಿತು. 'ಸಂಕಟ ಬಂದಾಗ ವೆಂಕಟರಮಣನೆಂದು!' ಮಾಧವನಿಗೆ ಆ ರಾಧಾಶ್ಯಾಮನಿಗೆ ಮೊರೆಯಿಟ್ಟಳು. ಅತ್ತತ್ತು ಕರೆದಳು—'ರಾಧಾಶ್ಯಾಮಾ, ಓ ಮನೋಭಿರಾಮಾ – ನೀನಾದರೂ ಬರಲಾರೆಯಾ? ನೀನೂ ಕೈ ಬಿಟ್ಟೆಯಾ? ಓತಾಯಿ, ಸತ್ಯಭಾಮಾ – ನೀನಾದರೂ ಬಾರೇತಾಯಿ! ನೀನೂ ಬರಲಾರೆ, ನಿನ್ನನಾಥನನ್ನೂ ಕಳುಹಲಾರೆ – ಅಲ್ಲವೇ? ಅಯ್ಯೋ ಮಾಧವಾ-ಸತ್ಯ ಭಾಮಾ ಮಾಧವ! ನಿನ್ನ ಮೊದಲಿನ ದಯಾ-ವ್ಯಾಮೋಹ

ವೆಲ್ಲಾ ಹೋಯಿತೇ ? ಒನ್ಮೆ ನಾನು ಕರೆದ ಮಾತ್ರಕ್ಕೆ ಓಡಿಬರುತ್ತಿದ್ದವನಲ್ಲವೇ ನೀನು ? ನೀನೂ ಈಗ..........ಗಿರಿಜೆಗೆ ಮುಂದೆ ಮಾತು ಹೊರಡದೆ ನಾಲಿಗೆ ಕಟ್ಟಿ ಹೋಯಿತು. ಪ್ರಜ್ಞಾ ಶೂನ್ಯಳಾದವಳಂತೆ ಮಲಗಿದಳು.

ಗಿರಿಜೆಯು ಸ್ತಬ್ಧಳಾಗಿದ್ದಾಗ ಸಮೀಪದಲ್ಲಿಯೇ ಮಂಜುಳವಾದ ಗೀತಾ ಧ್ವನಿಯೊಂದು ಹೊರಟಿತು. ಗಿರಿಜೆಯು ಚಕಿತೆಯಾಗಿ ತಲೆಯೆತ್ತಿ ನೋಡಿದಳು ; ಇದಿರಾಗಿ, ಪುಷ್ಕರಿಣಿಯ ಹಂತದ ಮೇಲೆ ಪೀತಾಂಬರಧಾರಿಯಾಗಿ ಕುಳಿತಿದ್ದ ತೇಜಸ್ವಿಯನ್ನೂ ಕಂಡಳು ; ಅವನೇ ತನ್ನ ಮಾಧವನೆಂದರಿತಳು. ಕುತೂಹಲದಿಂದ ಮತ್ತೆ ನೋಡಿದಳು;—ಮಾಧವನ ತೊಡೆಗೆ ತೊಡೆಯನ್ನು ಸೇರಿಸಿ ಕುಳಿತಿದ್ದ ಲಾವಣ್ಯ ಮಯಿಯಾದ ನಾರೀಮೂರ್ತಿಯನ್ನೂ ಕಂಡಳು. ಮತ್ತೆಯೂ ನೋಡಿ ದಳು. ನಾರೀಮಣಿಯು ಸಂಧ್ಯಾರಾಗದ ಪಟ್ಟೆ ವಸ್ತ್ರವನ್ನುಟ್ಟು, ನೀಲವರ್ಣದ ಕುಪ್ಪಸತೊಟ್ಟು, ಕಾಳಸರ್ಪದಂತೆ ತೋರುವ ವೇಣಿಯು ಎಡ ಭುಜದಮೇಲೆ ಹರಿದಾಡುತ್ತಿರಲು, ಕರಕಂಕಣಗಳು 'ಕಿಂಕಿಣಿ' ಶಬ್ದ ಮಾಡುತ್ತಿರಲು, ಕೊರಳೊಳಗಿನ ರತ್ನಹಾರಗಳು ಹಿಂದು ಮುಂದಕ್ಕೆ ಚಲಿಸುತ್ತಿರಲು, ಕರ್ಣಾಭರಣದ ಕಾಂತಿ ಕೆನ್ನೆಯ ಮೇಲೆ ಹೊಳೆಯುತ್ತಿರಲು, ಹಣೆಯಲ್ಲಿ ತಿದ್ದಿದ ತಿಲಕವು ಜಗನ್ಮೋಹಕವಾಗಿರಲು ಮುಗುಳು ನಗೆಯಿಂದ ಮಾಧವನ ಮುಖಬಿಂಬದಲ್ಲಿಯೇ ನಟ್ಟಕಣ್ಗಳುಳ್ಳವಳಾಗಿ ರಾಮಣೀಯಕವಾದ ಪುಷ್ಪಗಳಿಂದ ಮಾಲಿಕೆಯನ್ನು ರಚಿಸುತ್ತಿದ್ದಳು. ಮಾಧವನು ತನ್ನೆಡಭುಜವನ್ನವಳ ಕಂಠದಲ್ಲಿರಿಸಿ, ಬಲಗೈಯಿಂದ ಬಿಡಿಮೊಗ್ಗೆಗಳನ್ನು ಹಿಡಿದು ಅವಳ ವದನದ ಕಡೆಗೆ ತೋರಿಸಿ ನಗುತ್ತಿದ್ದುದನ್ನೂ ಕಂಡಳು. ಭ್ರಮೆಗೊಂಡಳು! ಮತ್ತೆ ಮತ್ತೆ ಕುತೂಹಲದಿಂದ ನೋಡಿದಳು. ವಿಚಾರಮಾಡಿದಳು. ಪೀತಾಂಬರನು ತನ್ನಿದಿರಾಗಿಯೇ- ಇಷ್ಟು ಸಮೀಪವಾಗಿಯೇ ಕುಳಿತಿದ್ದರೂ ತನ್ನ ಮೊರೆಯು ಅವನ ಕಿವಿಗೇ ಬೀಳಲಿಲ್ಲವೇನೆಂದು ನೊಂದಳು- ಕಣ್ಣೀರು ತಂದಳು - ಮನಸ್ಸಿನಿಂದ ಬೆಂದಳು ! ಕಡೆಗೆ, ಇಷ್ಟಾದ ಮೇಲೆ, ತಾನೇ ಎದ್ದು ಹೋಗಿ ಆತನ ಇದಿರಾಗಿಯೋ ಆತನು ಬೇಡಬೇಡೆಂದು ತಡೆದರೂ ಕೇಳದೆ ಒಮ್ಮೆಗೇ ಪುಷ್ಕರಿಣಿಯಲ್ಲಿ ಧುಮ್ಮಿಕ್ಕಿ ಬಿಡುವೆನೆಂದು ಗುಣಿಸಿ, ಮತ್ತೆ ಏಳಹೋದಳು. ಮೊದಲಿಗೂ ಹೆಚ್ಚಿನ ಅಶಕ್ತಿಯಾತನೆ. ಕೈಕಾಲುಗಳ ಕೀಲುಗಳೇ ಬಿದ್ದು ಹೋದಂತಾಯಿತು. ಆಗಳಂತೂ ಅವಳಿಗಾದ ದುಃಖವನ್ನು ಹೇಳತೀರದು. ಅಳುತ್ತ ಮುಸುಕಿಟ್ಟು ಕೊಂಡಳು.

ಗಿರಿಜೆಯು ಮುಸುಕಿಟ್ಟು ಮಲಗಿದೊಡನೆ "ಗಿರಿಜೆ ಹುಚ್ಚಿಯಾದಿಯೇನು, ನೀನು ?" ಎಂಬ ಸಹಾಸ್ಯವಾಕ್ಯವು ಕಿವಿಗೆ ಬಿದ್ದಿತು. ಥಟ್ಟನೆ ಕಣ್ದೆರದು ನೋಡಿದಳು; ಗುಲಾಬಿ ಬಣ್ಣದ ಪತ್ತಲ, ಜರತಾರಿ ಅಂಚಿನ ಹಸರು ಕುಪ್ಪಸ, ಆಕಾಶ ವರ್ಣದ ಮೇಲುದು, ಅಂದವಾಗಿ ಮುತ್ತಿನ ಹಾರದಿಂದ ಸುತ್ತುವರಿಯ ಲ್ಪಟ್ಟು ಕಟ್ಟಿದ ಕಬರಿ, ಹಣೆಯಲ್ಲಿ ಹೊಳೆವ ತಿಲಕ, ಕಿವಿಯಲ್ಲಿ, ಕೊರಳಲ್ಲಿ, ತಲೆಯ ಮೇಲೆ ಸಹ ಪುಷ್ಪಗಳ ಆಭರಣಗಳು, ಇಂತಿಷ್ಟು ಅಲಂಕಾರಗಳಿಂದ ಒಪ್ಪುವ ನಡುಹರೆಯದ ಚಲುವ ಹೆಂಗಸೊಬ್ಬಳು ಮುಂದೆ ನಿಂತು ಕರೆಯುತ್ತಿದ್ದುದನ್ನು ಕಂಡಳು. ವಿಸ್ಮಯದಿಂದ ಕೇಳಿದಳು —'ನೀನಾರು ತಾಯಿ, ಹೊಸಬಳಾಗಿದ್ದೀ!'

ಹೆಂಗಸು—"ನಾನಾರೇ ? ನಿನಗೆ ಗೊತ್ತಿಲ್ಲವೇ ? ಹಾಗಿದ್ದರೆ ಕೇಳು, ನಾನು ನಿನ್ನ ಸವತಿ!" ಎಂದು ಹೇಳಿ ಕಿಲಕಿಲನೆ ನಕ್ಕು ಬಿಟ್ಟಳು.

ಗಿರಿಜೆಯು ಮೋರೆ ತಗ್ಗಿಸಿ ಸಂಕೋಚದಿಂದ 'ನಗೆ ಚಾಟಿಗೆ ಬೇಡ, ಅಕ್ಕಾ! ನೀನು ನನಗೆ ಸವತಿಯಾಗುವುದು ಹೇಗೆ? ನಿನ್ನ ಹೆಸರೇನು- ಅದನ್ನಾದರೂ ಇಷ್ಟು ಹೇಳು.

ಹೆಂಗಸು—ಹುಚ್ಚಿ ಕೇಳು,—ನಾನೇ ರಾಧೆ. ನನ್ನ ಮಾಧವನಿಗೆ ಎಂದರೆ ನೀನು ಸ್ಮರಿಸುತ್ತಿರುವ ಆ ನಿನ್ನ ರಾಧಾಶ್ಯಾಮನಿಗೆ ನೀನು ನಚ್ಚಿನ ಗೆಳತಿ ಯೆಂದಮೇಲೆ - ನಾವಿಬ್ಬರೂ ಸವತಿಯರೆಂದು ಹೇಳು. (ಹೀಗೆ ಹೇಳಿ ಮತ್ತೆ ಮೊದಲಿನಂತೆಯೇ ನಕ್ಕಳು.)

ಗಿರಿಜೆ—(ಖಿನ್ನಳಾಗಿ) ಅಕ್ಕಾ! ಹೀಗೇಕೆ ನಗುತ್ತೀ! ನಿನ್ನ ನಗೆ ನನ್ನ ಹೊಟ್ಟೆಗೆ ಬೆಂಕಿಸುರಿದಂತಾಗುತ್ತಿದೆ?

ರಾಧೆ—ನನ್ನ ನಗೆಯೇಕೆನ್ನುವೆ! ನಾನೂ ಬಹುಕಾಲದಲ್ಲಿ ನಿನ್ನ ರಾಧಾ ಶ್ಯಾಮನಿಗಾಗಿ ಹಲುಬಿ ಹಲುಬಿ ಸತ್ತಂತಾಗಿದ್ದೆನೆಂದೂ ಈಗ ನಿನ್ನವಸ್ಥೆಯೂ ಹಾಗೆಯೇ ಆಗಿದೆಯೆಂದೂ ನೆನಸಿ ನಗುತ್ತಿದ್ದೇನೆ.

ಗಿರಿಜೆ—(ಗದ್ಗದ ಸ್ವರದಿಂದ) ಆದರೆ, ನಗಬೇಡವೇ ಅಕ್ಕಾ! ನಿನ್ನ ಶ್ಯಾಮನು ನನಗಿಷ್ಟು ದುರ್ಲಭನಾಗಿದ್ದಾನೇಕೆ ?

ರಾಧೆ—ಏನೆಂದು ಬೇರೆ ಕೇಳುತ್ತೀಯೇನು ? ನಿನ್ನಲ್ಲಿ ಪತನಿಷ್ಠೆಯಿಲ್ಲದ್ದರಿಂದ!

ಗಿರಿಜೆ—(ಆತುರದಿಂದ) ಏಕನಿಷ್ಠೆಯಿಲ್ಲವೆನ್ನುವೆ - ಹೇಗೆ ?

ರಾಧೆ—ಹೇಗೆಂದು ಬೇರೆ ಹೇಳಬೇಕೇ? ಮೊದಲು ನೀನು ತನು-ಮನೋ ಧನ- ಸರ್ವಸ್ವವನ್ನೂ ಸಮರ್ಪಿಸಿ, ಆತನ ದಾಸಾನುದಾಸಿಯಾಗಿದ್ದೆಯಲ್ಲ. ಆಗ ಆತನು ನಿನಗೆ ಅದೆಷ್ಟು ಸುಲಭನಾಗಿದ್ದನೆಂದಾದರೂ ಧ್ಯಾನಿಸು. ಆ ಬಳಿಕ ನೀನು ಆ ಮಹಾಮಹಿಮನಲ್ಲಿರಿಸಿದ ಸ್ಥಾನವನ್ನು ಅವನ ಅಂಶಾಂಶವೆನಿಸಿದ ಮಾನವ ಮೂರ್ತಿಯಲ್ಲಿ ಒಪ್ಪಿಸಿದೆ; ಚಾಪಲ್ಯಕ್ಕೊಳಗಾದೆ; ಕ್ಲೇಶ ಸಂತಾಪಗಳಿಗೆ ತುತ್ತಾದೆ; ನಿನ್ನ ಚಿತ್ತದಲ್ಲಿ ಏಕರೂಪವಾಗಿದ್ದ ನಿಷ್ಠೆಯು ಮೊದಲು ಭಿನ್ನವಾಗಿ ರಾಧಾಶ್ಯಾಮನಿಗೆ ಅರ್ಧವೂ ನಿನ್ನ ಸಹಕಾರ ಪಾತ್ರಕ್ಕೆ ಮತ್ತರ್ಧವೂ ವಿವಿಯೋಗವಾಗುತ್ತಿದ್ದುದು ಬರುತ್ತಾರುತ್ತ - ನಿನ್ನ ಮನನ, ನಿಧಿ, ಧ್ಯಾನ ಸಮಸ್ತವೂ ಆ ನಿನ್ನ ಸಾಕಾರ ನೆನಿಸಿದವನಲ್ಲಿ ತನ್ಮಯವಾಗಿ ಹೋಯಿತು! ಹೆಚ್ಚೇಕೆ? ನಿನ್ನ ರಾಧಾ ಶ್ಯಾಮನನ್ನು - ಆ ಪುರುಷೋತ್ತಮನನ್ನು ಕೂಡ ನೀನು ನಿನ್ನ ಸಾಕಾರನ ಅಂತರಾತ್ಮನಲ್ಲಿ ತಾದಾತ್ಮ್ಯಹೊಂದಿಸಿ ನೋಡುತ್ತ ಬಂದೆ, ಎಂದಮೇಲೆ ನನ್ನ ಶ್ಯಾಮನು ನಿನಗೆ ಕೈಗೆ ನಿಲುಕಿ ನಿಲುಕದಂತಿದ್ದುದು ಹೆಚ್ಚೇ?

ಗಿರಿ—ಮಾತಿಲ್ಲದೆ ಅಳತೊಡಗಿದಳು.

ರಾಧೆ—ಸುಮ್ಮನೇಕೆ ಅಳುತ್ತೀ? ಹೇಳು, ನೀನಿರಿಸಿದ್ದ ಏಕನಿಷ್ಠೆಗೆ ನಿನ್ನ ಮನೋರಮಣನು ನಿನ್ನಲ್ಲೇನಾದರೂ ಪ್ರಸನ್ನನಾದನೇ? ಆತನ ಮನಸ್ಸು ನಿನ್ನ ಕಡೆಗಿರುವದೆಂದಾದರೂ ಸಂಬಿದ್ದೀಯಾ? ಮಾನವನ ಮನಸ್ಸು ಅತ್ಯಂತ ಚಂಚಲವಾದುದು. ಅದರಲ್ಲಿಯೂ ಪುರುಷರ ಮನಸ್ಸು, ಯಾವಗಳಿಗೆಯಲ್ಲಿ, ಯಾವ ಕಡೆಗೆ ಬೇಕಾದರೂ ಹೊರಳಿಕೊಳ್ಳಬಹುದು. ಪ್ರತ್ಯಕ್ಷದಲ್ಲಿರುವವರೇ ಮಾತ್ರ ಸತೀ - ಸುತ, ಪಿತ-ಮಿತ್ರ-ಪರಿವಾರಗಳು; ಪರೋಕ್ಷದಲ್ಲಿದ್ದಾಗ ಅವರ ಸ್ಮರಣೆಯಾದರೂ ಇವರಿಗಾಗುವದೆಂದು ಧೈರ್ಯದಿಂದ ಹೇಳುವಂತಿಲ್ಲ. ಹಾಗೆಯೇ ನಿನ್ನ ಮನೋರಮಣನ ಮನಸ್ಸಾದರೂ ಅನ್ಯತ್ರ ವಿರಕ್ತವಾಗಿ ಹೋಗಿರಬಹುದು. ಗಿರಿಜಾ! ಸಾಕ್ಷಾತ್ ಪುರುಷೋತ್ತಮನಾದ ಮಾಧವನಿಗೇ ಈ ಅಪವಾದವು ತಪ್ಪಲಿಲ್ಲ.

ಗಿರಿ—(ಉದ್ವಿಗ್ನತೆಯಿಂದ) - ತಾಯಿ ! ಸಾಕುಮಾಡಿನ್ನು ! ನನಗಿಗೆ ನಿಂದೆಯು ಬೇಕಾಗಿಲ್ಲ. ನೀನಾಡಿದುದೆಲ್ಲಾ ನನ್ನ ಪರೀಕ್ಷೆಗಾಗಿಯೇ ಎಂದು ನಾನು ಬಲ್ಲೆ. ನನಗೀಗ ಬೇಕಾದುದು ಮಾಧವನ ಸುಪ್ರಸನ್ನತೆಯೊಂದೇ! ಅದು ನಿನ್ನಿಂದ

ಸಾಧ್ಯವಾಗದ ಸಂಗತಿಯಾದರೆ ನೀನೂ ಹೊರಟು ಹೋಗು. ದೀನನಾಥನೆಂದೆನಿಸಿಕೊಂಡವನು ತನ್ನನ್ನೇ ನೆರೆನಂಬಿದ ಮಾನಿನಿಯನ್ನು, ದೀನಳಾದ ಅಬಲೆಯನ್ನು,-ಕೈಬಿಡುವದಾದರೆ ಬಿಡಲಿ. ನನ್ನ ಕರ್ಮವೇ ನನ್ನ ಬೆನ್ನು ಹತ್ತಿರಲಿ.—

ರಾಧೆ—ನಗು ನಗುತ್ತ ಪುಷ್ಕರಿಣಿಯ ಕಡೆಗೆ ತಿರುಗಿ, ಕೈ ತಾಳಗಳನ್ನು ಹಾಕುತ್ತ ಮೋಹಕ ಸ್ವರದಿಂದ ಹಾಡಿದಳು.

ರಾಗಾ-- (ಮುದ್ದು ಕುಮಾರಯ್ಯನೆ).

ಎದ್ದು ಬಾ ಬಾ ಬೇಗನೇ- ಪದ್ಮಾಸದನನೇ ||ಪ|| ತಿದ್ದಿ ತಿಲಕವ-ಮುದ್ದು ಸುರಿಸುವ ಮುಖ ಮುದ್ರೆ ಯಾಗತೋರೋ ಹೊದ್ದಿ ಕೆಲವಸಾರೋ | ಬೇಗ ಬಾರೋ || (ಭಕ್ತವತ್ಸಲನೆ) || ಅ || ನಿನ್ನ ವಿರಹದಿ- ಖಿನ್ನಳಾದೀ ಕನ್ನೆಯೊಳ್ ಪ್ರಸನ್ನನಾಗು ನೀರಾ-ಮನ್ನಿಸಿವಳ ಧೀರಾ - ಸುಮನೋಹರ || ಬಾರೋ - ಭಕ್ತವತ್ಸಲನೆ ||೧|| ಛಲವು ಹೆಚ್ಚಿತು- ಬಲವು ತಗ್ಗಿತು-ಖಿನ್ನಳನೆ ನೊಂದಳಿನ್ನಲಸದೆ - ಒಲಿದು ಬಾರೊ ತ್ವರಿತದೆ. ನಲವೇರುವಂದದೇ || ಭಕ್ತವತ್ಸಲನೆ ||೨||

ಗಾನವನ್ನು ಕೇಳುತ್ತ ಕೇಳುತ್ತ ಗಿರಿಜೆಯು ಪರವಶಳಾಗಿ ಹೋದಳು. ಅವಳ ಕಣ್ಣುಗಳು ಊರ್ಧ್ವ ದೃಷ್ಟಿಯುಳ್ಳವುಗಳಾದವು. ಕೈಗಳೆರಡೂ ಸೇರಿದುವು. ಅಷ್ಟಕ್ಕೇ ರಾಧೆಯು ಗೀತೆಯೂ ನಿಂತುಹೋಯಿತು. ಗಿರಿಜೆಗೆ ಬಾಹ್ಯ ವ್ಯಾಪಾರ ಜ್ಞಾನವುಂಟಾಯಿತು. ರಾಧೆಯು ಕಡೆಗೆ ನೋಡಿದಳು. ರಾಧೆ ಈಗ ಮತ್ತೊಬ್ಬಳ ಕೈಹಿಡಿದು ಕೊಂಡು ನಿಂತಿದ್ದಳು; ಮತ್ತೊಬ್ಬಳೆಂದರೆ ಪುಷ್ಕರಿಣಿಯು ಮೇಲ್ಗಡೆ ಮಾಧವನ ಜೊತೆಯಲ್ಲಿ ಕೊಳದಲ್ಲಿ ಕುಳಿತಿದ್ದ ಮಾನಿನೀಮಣಿಯು !

ಗಿರಿ —(ವಿಳಹೋದಳು, ಆಗಲೂ ಆಗಲಿಲ್ಲ, ಮೆಲ್ಲನೆ ಕೈಮುಗಿದು) ತಾಯಿ, ನನ್ನ ಜೀವನೀವನೆಲ್ಲಿ ? ಮರೆ ಮಾಡಿದ್ದೀಯಾಕೆ ? ದೇವಿ, ನಾನು ನಿನಗೇನೇನೂ ದ್ರೋಹ ಮಾಡಿಲ್ಲವಲ್ಲೇ ಎಂದಳು.

ದೇವಿ—(ನಗುತನಗುತ) ನೀನೆಂಥ ಹುಚ್ಚಳಿದ್ದೀ ? ನಾನು ಮರೆಮಾಡುತ್ತೇನೆಂದಿದ್ದೀಯೇನು ? ಮಾಯಕಾರಮಾಧವನಿಗೆ ಮಡದಿಯರೆಷ್ಟೋ ! ಮಿತ್ರರೆಷ್ಟೋ !! ಗಣಿಸಿಗುಣಿಸಲಾಗದಷ್ಟು ಸವತಿಯರೊಡನೆ ಕೂಡಿ ಬಾಳುವ ನಮಗೆ ಮಾಧವನು ಮಾಡುವ ಮಾಟಗಳು ಅಷ್ಟಿಷ್ಟೆನ್ನುವಂತಿಲ್ಲ. ಈ ಕ್ಷಣದಲ್ಲಿ ನನ್ನನ್ನು ಕುಣಿದಾಡಿಸುತ್ತಿದ್ದವನು ಉತ್ತರ ಕ್ಷಣದಲ್ಲಿಯೇ ಮತ್ತೊಬ್ಬಳನ್ನು ಭುಜದ ಮೇಲೇರಿಸಿ ಕುಳ್ಳಿರಿಸಿ ಮುದ್ದಿಸುವನು. ಅಂಥಿಂಥವನೆಂದೆನ್ನಲಾಗದ ಹೊಂತಕಾರಿ

ಯನ್ನು ನಾನೆಂತು ಅಂಕೆಯಲ್ಲಿಡಬಲ್ಲೆನು ? ನಾವೆಲ್ಲರೂ ಅವನಿಗೆ ಮೋಸ ಹೋಗಿರುವವರೇ! ಗಿರಿಜೆ ! ನಾನಾದರೂ ಮಣಿಯ ವ್ಯಾಜದಿಂದ ಮರೆಯಾದ ಮಾಧವನನ್ನು ಕೋರಿತು ತಪಿಸಿ ತಪಿಸಿ, ಕಪಿಯಂತೆ ಕುಣಿದಾಡಿ ಕಂಗೆಟ್ಟಿರುವವಳೇ !

ಗಿರಿ — ದೇವಿ ! ದಯೆ ಮಾಡಿ ಸಾಕುಮಾಡಿನ್ನು ನನಗೀ ನಿಮ್ಮ ಸಮಾಧಾನವು ಬೇಕಿಲ್ಲ. ಮಾಧವನು ಒಮ್ಮೆ ಬಂದು ನನ್ನನ್ನು ತನ್ನ ಎಡಗಾಲಿಂದ ಒದ್ದು ನೂಕಿಯಾದರೂ ಹೋಗಲಿ, ಸಾಕು. ಅವನ ಮುದ್ದು, ಲಲ್ಲೆಗಳೇನೂ ನನಗೆ ಬೇಡ. ಆತನನ್ನೊಮ್ಮೆ ನನಗೆ ತೋರಗೊಟ್ಟರೆಂದರೆ, ಮುಂದೆ ಎಂದೆಂದಿಗೂ ನಾನು ನಿಮಗೆ ಅಂಕಿತಳಾಗಿರತಕ್ಕವಳು. ಅಷ್ಟು ಮಾಡು.

ಸತ್ಯಭಾಮೆಯು ಒಮ್ಮೆ ಕೈ ತಟ್ಟಿ ಸನ್ನೆ ಮಾಡಿದಳು. ಪುಷ್ಕರಿಣಿಯ ಕಡೆಯಿಂದ ಕೊಳಲಗಾನವು ಕೇಳಬಂದಿತು. ಗಾನದ ಇಂಪಾದ ದನಿಯೊಂದಿಗೆ ಕಂಪಿನಿಂದ ಕೂಡಿದ ತಂಪಾದ ಗಾಳಿಯೂ ಸೇರಿ ಗಿರಿಜೆಯ ಕಿವಿ, ಹೃದಯಗಳನ್ನು ಮುಟ್ಟಲು ಗಿರಿಜೆಯ ಮೈ ಪೊಂಪುಳಹೊಂದಿತು. ಕಣ್ಣುಗಳು ಮುಚ್ಚಿದುವು. ನಾಲಗೆಯ ದ್ರವವಾರಿತು. ಹೃದಯವು ತಲ್ಲಣಿಸಿತು. ಕೈಗಳೆರಡರಿಂದಲೂ ಹೃದಯವನ್ನು ಒತ್ತಿದಳು. ಆದರೂ ಉಸಿರಾಡುವುದು ವೇಸವಾಯಿತು. ಕೈಕಾಲುಗಳಲ್ಲಿಯೂ ದೇಹದಲ್ಲಿಯೂ ನಡುಕವುಂಟಾಯಿತು.

ಇಷ್ಟಾಗುವುದರಲ್ಲಿ ಗಿರಿಯ ಕಿವಿಗಳಿಗೆ ಅಮೃತವನ್ನು ಸುರಿಸಿದಂತಾಯಿತು ; ಮೈಮೇಲೆ ಅಮೃತದಹನಿಗಳನ್ನು ತಳಿದಂತಾಯಿತು ; ಎದೆಯ ಮೇರಿಸಿಕೊಂಡಿದ್ದ ಅವಳ ಎರಡು ಕರಗಳೂ-ಅಮೃತ ಸುಶೀತಲವೆನ್ನಿಸಿದ ದಿವ್ಯಹಸ್ತದಿಂದಾದೃತವಾದಂತಾಯಿತು ; ಅಷ್ಟೇ ಅಲ್ಲ- ಗಿರಿಯಗಲ್ಲಕ್ಕೆ ಏನೋ ಸ್ಪರ್ಶವಾಯಿತು. ಅದರೊಡನೆ- ‹ ಗಿರಿ, ನನ್ನ ಗಿರಿ ಬಾಲೆ ! ಸಂತೈಸಿಕೋ,-ಅಭಯವಾಣಿ ಹೊರಟಿತು.

ಗಿರಿಜೆಯು ಕಣ್ದೆರೆದು ನೋಡಿದಳು. ಪುಷ್ಪಾಭರಣ ಸಂಶೋಭಿತನಾದ ಮಾಧವನು, ಪುಷ್ಕರಿಣಿಯ ಹಂತದ ಮೇಲೆ ಸತ್ಯಭಾಮೆಯೊಡನೆ ಸರಸವಾಡುತ್ತಿದ್ದ ಪೀತಾಂಬರನು, ತನ್ನ ಧ್ಯಾನಕ್ಕೆ ಗುರಿಯಾಗಿರುವ ರಾಧಾಶ್ಯಾಮನು ತನ್ನ ಮೈಮೇಲೆ ಆತು ಕುಳಿತಿರುವನು. ಆದೇವದೇವನ ವಾಮ ಹಸ್ತದಿಂದ ತನ್ನ ಹೃದಯದ ಮೇಲಿದ್ದ ಕರಗಳೆರಡೂ ಆದೃತವಾಗಿರುವುವು. ಆತನ ದಕ್ಷಿಣ ಹಸ್ತವು ತನ್ನ ಹಣೆಯ ಮೇಲೆ; ಗಲ್ಲದ ಮೇಲೆ ಆ ದಯಾಸಾಗರನ ಮುಖಬಿಂಬ; ಆದೇವದೇವನ ಕೃಪಾದೃಷ್ಟಿ ತನ್ನ ದೃಷ್ಟಿಯಲ್ಲಿ ನಟ್ಟಿದೆ. ಇದೆಲ್ಲವನ್ನೂ ನೋಡಿದ ಮೇಲೆ ಗಿರಿಗೆ ಉಂಟಾದ ಸುಖ-ಅನುಭವಗಳನ್ನಿಲ್ಲಿ ವರ್ಣಿಸಲು ಯಾರಿಗೆ ಸಾಧ್ಯ ! ಅಂತಹ ಅನುಭೂತವಾದ ಅನುಭವವನ್ನು ಹೊಂದಿಯೂ ಅವಳು ಅಧೀರಳಾಗಿ ಬಿಕ್ಕಿ ಬಿಕ್ಕಿ ಅತ್ತು ಬಿಟ್ಟಳು.

ಗಿರಿಜೆಯ ಈ ಅವಸ್ಥೆಯನ್ನು ನೋಡಿದ ಮಾಧವನು ಕನಿಕರದಿಂದ ತನ್ನೆಡ ಗೈಯಿಂದ ಅವಳ ಕೈಗಳನ್ನು ಹಿಡಿದು ಬಲಗೈಯಿಂದ ಅವಳ ಹಣೆಯನ್ನು ಸವರುತ್ತ 'ಗಿರಿ, ಅಳುತ್ತೀಯೇಕೆ ? ಏನಾಯ್ತು ನಿನಗೆ ? ಮಾತಾಡಲೊಲ್ಲೆಯೇನು ?' ಎಂದು ಕೇಳಿದನು.

ಗಿರಿಜೆಯು ಇನ್ನೂ ಮಾತಾಡುವ ಸ್ಥಿತಿಗೆ ಬಂದಿರಲಿಲ್ಲ. ಮಾಧವನು ಮತ್ತೆ ಕನಿಕರದಿಂದ ಕೇಳಿದನು

'ಗಿರಿಬಾಲೆ, ನಿನ್ನ ಪ್ರಾರ್ಥನೆಯಂತೆ ನಾನೇ ಬಂದಿರುವೆನಲ್ಲ ? ಮಾತಾಡ ಲೊಲ್ಲಿಯಾಕೆ ? ನಿನಗೇನಾಗಿದೆ ?

ಗಿರಿ—(ಕಂಪಿತ ಸ್ವರದಿಂದ) ಭಗವನ್ ! ನನಗಿನ್ನೇನಾಗಬೇಕು ? ಯಾವ ಸ್ವಾಮಿ, ನನ್ನಲ್ಲಿ ಪೂರ್ಣಾಭಿಮಾನಿಯಾಗಿದ್ದಾನೆಂದು ನೆರೆ ನಂಬಿ ಹಿಗ್ಗುತ್ತಿದ್ದೆನೋ ಆತನು ಈಗ ನನ್ನಲ್ಲಿ ಇಷ್ಟು ಉದಾಸೀನ ! ಇದಕ್ಕೂ ಹೆಚ್ಚಿನ್ನೇನಾಗಬೇಕು.

ಮಾಧವ:—ಉದಾಸೀನನಾಗಿರುವನೆಲ್ಲಿ ? ನಿನಗೆ ಹೇಳಿದವರಾರು ?

ಗಿರಿ—ಹೇಳುವುದೇಕೆ ? ನಡತೆಯೇ ಹೇಳಿಕೇಳುತ್ತಿದೆಯಲ್ಲವೆ ? ಮಾಧವಾ ! ಮತ್ತೆಯೂ ವಂಚನೆಯ ನುಡಿಯೇಕೆ ?

ಮಾಧವ—ಗಿರಿ, ನೀನಾಡಿದುದು ಯಾರ ಮಾತು ? ನಿನ್ನನ್ನು ನಾನು ವಂಚಿಸಿದೆನೇ ?

ಗಿರಿ— ಮತ್ತಾರ ಮಾತನ್ನಾದರೂ ನನ್ನಾಕೆ ಹೇಳಲಿ, ಮಾಧವಾ ! ನೀನಲ್ಲದೆ ನನಗೀ ವೇಳೆಯಲ್ಲಿ ಅಭಿಮಾನ ಕಾಯ್ವರಾಗಲೀ ಆದರಿಸುವರಾಗಲೀ ಮತ್ತಾರು ? ನೀನನಾಥನೂ ಲೋಕನಾಯಕನೂ ಆದ ನೀನೇ ವಂಚಕನಾದ ಮೇಲೆ ಅನ್ಯರ ಮಾತನ್ನು ಹೇಳುವದೇನು ?

ಮಾಧವ:—(ಮುಗುಳು ನಗೆಯಿಂದ) ನಾನು ವಂಚಕನಾದೆನೇ ? ಗಿರಿ, ನಿನ್ನನ್ನು ನಾನು ವಂಚಿಸಿದೆನೆಂದು ತಿಳಿದಿದ್ದೀಯೇನು ?

ಗಿರಿ—ವಂಚಿಸಿದ್ದೀಯೆಂದು ತಿಳಿದಿರುವುದು ಮಾತ್ರವಲ್ಲ. ಮಾಧವಾ! ನೀನು ನನ್ನನ್ನು ಪೂರ್ಣವಾಗಿ ವಂಚಿಸಿದ್ದೀಯೆಂದು ಸಾರಿ ಸಾರಿ ಹೇಳುವೆನು. ಅಷ್ಟೇ ಅಲ್ಲ. ಬಂಧಿಸಿಯೂ ಅಂಧಕಾರ ಕೂಪದಲ್ಲಿ ನೂಕಿ ಕೊಲ್ಲುತ್ತಿರುವೆ ಯೆಂದೂ ಹೇಳುವೆನು

ಮಾಧವ—ವೃಥಾ ನಿಂದಿಸುವುದೇಕೆ ? ಗಿರಿ, ನಾನು ನಿನ್ನಲ್ಲಿ ಎಷ್ಟೋ ಮಮತೆಯುಳ್ಳವನಾಗಿರುವೆನು, ಆದರೂ ಸುಳ್ಳು ಆರೋಪವೇಕೆ ?

ಗಿರಿ: —ವಂಚಿಸಿದ್ದೀಯೆಂದು ತಿಳಿದಿರುವುದು ಮಾತ್ರವಲ್ಲ. ಮಾಧವಾ! ನೀನು ನನ್ನನ್ನು ಪೂರ್ಣವಾಗಿ ವಂಚಿಸಿದ್ದೀಯೆಂದು ಸಾರಿ ಸಾರಿ ಹೇಳುವೆನು. ಅಷ್ಟೇ ಅಲ್ಲ. ಬಂಧಿಸಿಯೂ ಅಂಧಕಾರಕೂಪದಲ್ಲಿ ನೂಕಿ ಕೊಲ್ಲುತ್ತಿರುವೆಯೆಂದೂ ಹೇಳುವೆನು.

ಮಾಧವ:—ವೃಥಾ ನಿಂದಿಸುವಿಯೇಕೆ ? ಗಿರಿ, ನಾನು ನಿನ್ನಲ್ಲಿ ಎಷ್ಟೋ ಮಮತೆಯುಳ್ಳವನಾಗಿರುವೆನು. ಆದರೂ ಸುಳ್ಳು ಆರೋಪವೇಕೆ ?

ಗಿರಿ:—ಸುಳ್ಳು ಹೇಳಲಿಲ್ಲ, ಮಾಧವಾ! ನಿನ್ನ ಮಮತೆಯು ಈವರೆಗೆ ಎಲ್ಲಿತ್ತು ? ಅದನ್ನಾದರೂ ಹೇಳಲಾರೆಯಾ ? ನಿನ್ನನ್ನೇ ಅನನ್ಯ ಭಾವದಿಂದ ಭಜಿಸುತ್ತಿದ್ದವಳನ್ನು ನಿನ್ನ ಮಾಯೆಗೆ ಒಳಪಡಿಸಿ, ಆಶೆಗೆ ಪರವಶಳಾಗುವಂತೆ ಮಾಡಿದ್ದು ವಂಚನೆಯಲ್ಲವೆ ? ಮೆಲ್ಲಮೆಲ್ಲನೆ ನೀನು ಸರಿಸರಿದು ನನಗೆ ದೂರವಾಗಿ ಹೋದುದು ಮೋಸವಲ್ಲವೆ ? ಇಷ್ಟು ಕಾಲ ನನ್ನನ್ನು ನರಳಿಸಿದ್ದೂ ನಿನ್ನ ಮಮತೆಗೆ ಹೆಗ್ಗುರುತಲ್ಲವೇ ?

ಮಾಧವ:—ಗಿರಿ, ನಿನ್ನ ತಿಳಿವಳಿಕೆ ತಪ್ಪಾದುದು. ನಾನು ಹಾಗೇನೂ ಮಾಡಿಲ್ಲ. ನೀನು ಕರ್ಮಕ್ಷೇತ್ರದಲ್ಲಿ ಬೇಕೆಂದು ಧುಮ್ಮಿಕ್ಕಿದಿ. ಅದಕ್ಕನುಗುಣವಾದ ಕರ್ಮಗಳನ್ನು ಕೈಕೊಂಡಿರುವಿ. ಎಂದ ಬಳಿಕ ಆ ಕರ್ಮಗಳಿಗೆ ತಕ್ಕ ಫಲಾಫಲಗಳನ್ನೂ ಹೊಂದಲೇ ಬೇಕಲ್ಲವೆ ?

ಗಿರಿ: —ಮಾಯಕಾರಕ ಅದರಲ್ಲಿ ಧುಮ್ಮಿಕ್ಕುವಂತೆ ಪ್ರೇರಿಸಿದವರಾರು ? ಅಭಯ ವಿತ್ತವರಾರು ? ಆಸೆಯನ್ನು ತೋರಿಸಿ, ಅದರಿಂದ ಮೋಸಹೋಗುವಂತೆ ಮಾಡಿ ಗಾಸಿ ಪಡಿಸಿದವರಾರು ? ನೀನಲ್ಲವೇ ?

ಮಾಧವ: —ನಾನು-ಹೇಗೆ ?

ಗಿರಿ: —ನೀನೇ-ನೀನೇ-ನೀನೇ ! ಮೂರು ಮೂರು ಬಾರಿಗೂ ನೀನೇ ! ಹೇಗೆನ್ನುವೆ-ಮಾಧವ ! ನಿನ್ನನ್ನೇ ಏಕಾಗ್ರತೆಯಿಂದ ಜಪಿಸುತ್ತಿದ್ದ ನನ್ನನ್ನು ನಿನ್ನ ಮಾಯೆಯಿಂದ ಬಂಧಿಸಿದೆ ; ಮತ್ತೊಂದು ಮೂರ್ತಿಯಲ್ಲಿ ಮನ ಎಳೆವಂತೆ ಚದರಿಸಿದೆ- ಈಗಲೂ ಕೈ ತಪ್ಪಿಸಿಕೊಳ್ಳಲಿರುವೆ !

ಮಾಧವ:—ಹುಚ್ಚಿ ! ಇಷ್ಟೊಂದು ನಿಷ್ಠೂರವಾಡುವುದು ನಿನಗೆ ಸರಿಯಲ್ಲ. ನಿನಗೇನಾಗಬೇಕೆಂದು ಹೇಳು.

ಗಿರಿ:—ಹೇಳಿದರೆ ನಡಿಸಿಕೊಡುವಿಯೋ ?

ಮಾಧವ:—ಆಗುವದಾದರೆ ನಡಸಿಕೊಡುವೆನು. ಇಲ್ಲವಾದರೆ ಆಗಲಾರದೆನ್ನುವೆನು.

ಗಿರಿ:—ಬೇಡ, ಹಾಗಿದ್ದರೆ ಕೇಳಲೇ ಬೇಡ. ಬಿಡು.

ಮಾಧವ:—ಹೇಳುವುದರಿಂದ ನಿನಗಾಗುವ ಹಾನಿಯೇನು ? ಮನಸ್ಸಿನಲ್ಲಿದ್ದುದನ್ನು ಆಡಿತೋರಿಸದೆ ಮುಚ್ಚಿಡುವುದು ಮಾತ್ರ ವಂಚನೆಯಲ್ಲವೋ-ಕೃತ್ರಿಮ ವೆನ್ನಿಸದೋ ?

ಗಿರಿ:—ಮಾಯಕಾರ, ಮತ್ತೆ ಮತ್ತೆಯೂ ಇದೇ ಮಾತು,-ನನ್ನಲ್ಲಿ ! ಆಡಿದಂತೆ ಮಾಡಲೊಲ್ಲದವನಲ್ಲಿ ಆಡಿಕೊಳ್ಳುವದರಿಂದ ಫಲವೇನು ? ನುಡಿಗೆ ತಪ್ಪುವವನು ನಡಸಿಕೊಡುವ ಭರವಸೆಯೇನು ?

ಗಿರಿ.—ವ್ಯರ್ಥವೇಳೆಗಳಿವೆ. ಅದೇನೆಂದು ಹೇಳಬಾರದೇ ?

ಗಿರಿ:—(ಕೈ ನೀಡಿ) ಮಾಧವಾ ! ಹಾಗಿದ್ದರೆ ಇನ್ನು ನನ್ನನ್ನು ನೀನೆಂದೆಂದಿಗೂ ವಂಚಿಸಲಿಕ್ಕಿಲ್ಲವೆಂದು ವಾಗ್ದಾನ ಮಾಡು. ಬೇಡ; ಆ ನಿನ್ನ ವಾಗ್ದಾನದಲ್ಲಿ ಭರವಸೆಯೂ ನನಗಿಲ್ಲ. ನೀನು ನನ್ನನ್ನು ಇನ್ನೆಂದಿಗೂ ಅಗಲುವದು ಮಾತ್ರ ಬೇಡ- ಈಗಲೇ ನನಗೆ ಈ ನಾಂಲ ಜನ್ಮವನ್ನು ಸಾಕುಮಾಡು; ನಿನ್ನಲ್ಲಿಗೆನ್ನನ್ನೂ ಸೇರಿಸಿಕೊಂಡು ಬಿಡು. ಅಷ್ಟು ಮಾಡಿದಿಯಾದರೆ ನನಗೆ ಯಥೇಷ್ಟವಾಯಿತು.

ಮಾಧವ.—(ನಕ್ಕು) ಅದು ಮಾತ್ರ ಈಗಲೇ ನಡೆಯಿಸತಕ್ಕುದಲ್ಲ. ಬೇಕೆಂದರೆ ನಾನು ನಿನ್ನವನಾಗಿದ್ದು, ವಂಚಿಸದೆ, ನೀನು ನೆನೆದಾಗ ನಿನ್ನಲ್ಲಿ ತೋರಿಕೊಳ್ಳುವೆನೆಂದು ಮಾತ್ರ ಭರವಸೆ ಕೊಡಬಲ್ಲೆ !

ಗಿರಿ:—ಅದನ್ನೇಕೆ ನಡೆಯಿಸಲಾರೆ ?

ಮಾಧವ:—ನನ್ನಿಂದ ಆಗತಕ್ಕ ಕೆಲಸವಿನ್ನೂ ಮುಗಿದಿಲ್ಲ; ಅಲ್ಲದೆ ನೀನು ಅನುಭವಿಸಬೇಕಾದ ಪ್ರಾಕೃತಫಲಗಳು ಇನ್ನೂ ಹಾಗೆಯೇ ಇವೆ.

ಗಿರಿ:—ಮಾಧವ; ನೀನು ಮಾಡುವ ಕೆಲಸವೆಂದರೆ ಪುರಾಕೃತವನ್ನು ಕುರಿತು ಮರುಗಿ ಕೊರಗಿ ಅನುಭವಿಸುವುದು ; ಪರಮಾತ್ಮನ ಕೃಪೆಯಾಗಿಯೂ

ಪ್ರಾಕೃತವು ಸಮೆಯದೆಂದರೆ ಇನ್ನು ನಿನ್ನ ಹಂಗಾದರೂ ಯಾರಿಗೆ ಬೇಕು ? ಹೋಗು-ನನ್ನ ಸಂಚಿತ ಕರ್ಮದ ಬೆನ್ನು ಹತ್ತುವದು ನನ್ನ ಪಾಲಿಗಿರಲಿ.

ಗಿರಿ:—ಇಷ್ಟೆಲ್ಲಾ ಉದಾಸಳಾಗುತ್ತೀಯಾಕೆ ? ಗಿರಿ, ಉದ್ವೇಗವನ್ನಡಗಿಸು; ತಾಳ್ಮೆಯನ್ನು ವಹಿಸು. ನಾನು ನಿನ್ನ ಶ್ರೇಯಸ್ಸಿಗಾಗಿಯೇ ಹೀಗೆ ಮಾಡಬೇಕಾಗಿದೆ. ಇಲ್ಲವಾದರೆ ನಿನ್ನ ಕೈ ಹಿಡಿದಿರುವ ನಿನ್ನ ಪತಿಗೆ-ನನ್ನ ಭಕ್ತನಿಗೆ-ನಾನು ಅನ್ಯಾಯ ಮಾಡಿದಂತಾಗುತ್ತದೆ. ನಿನ್ನ ವಿಯೋಗದೊಡನೆ ಆತನ ಬಲವು ಕುಗ್ಗುತ್ತದೆ, ಬಲವು ಗೆಲವು ಸಹ ಕಡಿಮೆಯಾಗುತ್ತದೆ. ಆಗ್ಗೆ ನನ್ನ ಉದ್ದೇಶಕ್ಕೆ ನಾನೇ ಭಂಗ ತಂದಂತಾಗುತ್ತದೆ. ಗಿರಿ, ನಿಧಾನಿಸು ಸಮಯೋಚಿತ ಸಹಾಯ-ಸಹಚಾರಗಳಿಂದ ನಿನ್ನ ಪತಿಯು ಮಾಡಬೇಕಾದ ಕೆಲಸಗಳು ಇನ್ನೂ ಇರುವಾಗ ನಿನ್ನನ್ನು ಹಾರಿಸಿಕೊಳ್ಳುವುದು ನೀತಿಯೇ ? ಅದು ಹೋಗಲಿ, ನೀನು ಮೊದಲು ಮಾಡಿದ್ದ ಪ್ರತಿಜ್ಞೆಯನ್ನು ತಪ್ಪಿ ನಡೆಯುವದಾದರೂ ನಿನಗೆ ಧರ್ಮವೇ? ಹೇಳು ? ಹೇಳು ?

ಗಿರಿ:—ಮಾಧವಾ ! ಧರ್ಮ-ನೀತಿ-ರೀತಿ, ಭಯ-ನಯ-ಎಲ್ಲಾ ನನಗೀಗ ಕಾಣದಂತಾಗಿ ಹೋಗಿವೆ. ನನಗೆ ಎಲ್ಲಾ ನೀನೇ ಆಗಿರುವದರಿಂದ ನಿನ್ನನ್ನೇ ಆಶ್ರಯಿಸಿದ್ದೇನೆ. ನಿನ್ನ ಕಟ್ಟಳೆಯಂತೆ ನಾನು ಪತಿಯ ಕೈಹಿಡಿದು, ಸತೀ ಕರ್ತವ್ಯವನ್ನು ನಡೆಯಿಸುವೆನೆಂದು ಪ್ರತಿಜ್ಞೆ ಮಾಡಿದ್ದು ನಿಜ. ಆದರೆ ನೀನೇ ಅದನ್ನು ನಡೆಯಗೊಡಲಿಲ್ಲ. ನಮ್ಮಿಬ್ಬರನ್ನೂ ಬೇರೆ ಬೇರೆ ಯಾಗಿರುವಂತೆ ಮಾಡಿದೆ. ಮೂರು ನಾಲ್ಕು ವರ್ಷಗಳಿಂದಲೂ ನಾನು ಪಡುಪಾಟು ಪಟ್ಟೆ, ನನ್ನ ಮನದಣಿಕೆ ಕೈಗೂಡಲಿಲ್ಲ. ನನ್ನ ಉಪಾಯವು ನಡೆಯಲಿಲ್ಲ ! ನನ್ನ ಯತ್ನಕ್ಕೆ ಫಲವಾಗಲಿಲ್ಲ. ಎಂದ ಬಳಿಕ ನಾನಿನ್ನೇನು ಮಾಡಬೇಕು ? ಮನಸ್ಸಿನ ತಾಪವೂ ಮೇರ ಮೀರಿತು, ಶಾರೀರಿಕ ಯಾತನೆಯೂ ಸಹಿಸಲಾಗದಂತಾಯಿತು. ಈ ವೇಳೆಯಲ್ಲಿ-ಈ ಉಭಯ ಸಂಕಟಗಳಿಂದ ನಾನು ಪಾರಾಗುವದೆಂದರೆ ಮತ್ತೆ ಹೇಗೆ-ನೀನೇ ಹೇಳು.

ಮಾಧವ:—ಗಿರಿ, ನಿನ್ನ ಕಷ್ಟ ಕೋಟಲೆ ಸಂತಾಪಗಳೆಲ್ಲವೂ ಇಷ್ಟರಲ್ಲಿಯೇ ನಿವಾರಣೆಯಾಗುವವು. ನಿನ್ನಿಷ್ಟವೂ ಸಿದ್ಧಿಸುವದು. ಧೈರ್ಯವಾಗಿರು. ನಾನು ಎಂದೆಂದಿಗೂ ನಿನ್ನವನೇ ಆಗಿರುವೆನು. ಆದರೂ-ಗಿರಿ; ನಾನು ಬೇಕೆಂದೇ

ನಿನ್ನನ್ನು ಒಂದು ಕರ್ತವ್ಯದಲ್ಲಿ ಕಟ್ಟು ಮಾಡಿದ್ದು ನೀನದನ್ನು ಕೆಡಿಸಿ ಬಿಡುವಷ್ಟು ವಿರಕ್ತಳಾಗುವದು ಮಾತ್ರ ಬೇಡ, ಈ ವರೆಗೆ ನಿನಗಾಗಿರುವ ಕಷ್ಟ-ಕ್ಲೇಶಗಳೂ ನಿನ್ನ ಮನಸ್ಸು ಪರಿಪಕ್ವವಾಗುವದಕ್ಕಾಗಿ ನನ್ನ ಇಚ್ಛೆಯಂತಾಗಿದೆ; ಇದಕ್ಕೆ-ನಿನ್ನ ಪೂರ್ವದ ಕಿಂಚಿತ್ ಪಾಪವಾಸನೆಯೂ ಆ ಮೂಲಕ ನಿನಗಾಗಿದ್ದ ಶಾಪ-ಉಪಶಾಪಗಳೂ ನಿಮಿತ್ತಗಳಾಗಿವೆ. ಅವೆಲ್ಲಾ ದುರಿತಗಳೂ ನಿನ್ನ ಪತಿಯ ಸಹ ವಾಸ-ಅನುಗ್ರಹದಿಂದ ನಿವಾರಣವಾಗಿ ಇನ್ನು ನೀನು ಶ್ರೇಯಸ್ಸನ್ನು ಹೊಂದುವೆ.

ಗಿರಿ:—ಮಾಧವ! ನೀನು ಹೀಗೆನ್ನುವೆ. ಪತಿಯ ಉದಾಸೀನಕ್ಕೆ ಪಾತ್ರಳಾಗಿ ಏಕಾಂಗಿಯಾಗಿರುವ ನಾನಿನ್ನು ಮಾಡುವ ಕೆಲಸವಾದರೂ ಯಾವದಿದೆ?

ಮಾಧವ:—ನಿನ್ನ ಪತಿ, ನಿನ್ನಲ್ಲಿ ಮನಃಪೂರ್ವಕ ಉದಾಸೀನನಾಗಿಲ್ಲ. ಆದರೆ ಕಾರ್ಯ-ಕಾರಣಗಳ ದೆಸೆಯಿಂದ ಉದಾಸೀನನಂತೆ ವರ್ತಿಸಬೇಕಾಗಿದೆ; ಅಲ್ಲದೆ, ನನ್ನ ಪ್ರೇರಣೆಯಾದೊಡನೆ ಆತನು ನಿನ್ನಲ್ಲಿಗೆ ಬಂದು ನಿನ್ನನ್ನೂ ಜೊತೆಗೊಂಡು-ಕಾರ್ಯವನ್ನು ಕೈಕೊಳ್ಳುತ್ತಾನೆ. ಇದು ಸತ್ಯವೆಂದು ನಂಬು ನಿನ್ನ ಪತಿಯಲ್ಲಿ ಸಂಶಯಪಟ್ಟು, ಜೀವನದಲ್ಲಿ ನಿರಾಶೆಗೊಂಡು, ನನ್ನಲ್ಲಿ ಐಕ್ಯವಾಗುವೆನೆಂದು ಆಶೆಪಡುವದು ಮಾತ್ರ ನಿನಗೆ ಅಧರ್ಮವು.

ಗಿರಿ;—ಮುಂದೆ ತಾಳದೆ ಹೋದಳು. ಅವಳ ಹೃದಯದಲ್ಲಿ ಏನೋ ಒಂದು ವಿಧವಾದ ಕಳವಳವು ತಲೆದೋರಿತು. ಕಣ್ಣುಗಳಲ್ಲಿ ನೀರು ತುಂಬಿತು. ತಡೆಯಲಾರದೆ ಅತ್ತು ಬಿಟ್ಟಳು.

ಮಾಧವನು ಎದ್ದು ಕುಳಿತು ಗಿರಿಯ ಮುಡಿದಡಹಿ? ಗಿರಿ ನಿನ್ನಗಿರಿ-ಪರಮಾರ್ಥದ ಕಡೆಗಿರಲಿ? ನಿನ್ನ ಪತಿ ಪ್ರೇಮವು ಯಾವಾಗಲೂ-ಯಾರ ಬೋಧನೆಯಿಂದಲೂ ಅಚ್ಚಳಿಯದೆ ಸ್ವಚ್ಛವಾಗಿರಲಿ, ನನ್ನಲ್ಲಿಯ ನಿನ್ನ ದೈವಿಕ ಪ್ರೇಮವು ಹೀಗೆಯೇ ವೃದ್ಧಿ ಹೊಂದುತ್ತ ಬರಲಿ. ಇನ್ನು ನಿನಗೂ ಸುಖ-ಶಾಂತಿ ಸಮೃದ್ಧಿಗಳುಂಟಾಗಲಿ! ಎಂದು ಹರಸಿದನು. ಗಿರಿಯು ಇನ್ನೂ ಪರವಶಳಾಗಿಯೇ ಇದ್ದಳು. ಕೆಲಬಲಗಳಲ್ಲಿದ್ದ ರಾಧಾ-ಸತ್ಯಭಾಮೆಯರು,-"ಗಿರಿಜಾ, ಕಣ್ದೆರೆ, ಸಾಕಿನ್ನು ಎದ್ದೇಳು. ಮಾಧವನು ನಿನ್ನ ಮುಂದೆ ಇನ್ನೆಷ್ಟು ಹೊತ್ತು ಕುಳಿತಿರಬಹುದು." ಎಂದರು. ಗಿರಿಜೆಯು ಥಟ್ಟನೆ ಕಣ್ತೆರೆದಳು-ನೋಡಿದಳು. ಮಾಧವ ನಿರಲಿಲ್ಲ. ಮಾಧವಾ! ಎಂದು ಮೈ ಮರೆದೊರಗಿದಳು.

# IV

ಮಾಧವನು ಮೈಗರೆದನೆಂದು ಮೈಮರೆತು ಒರಗಿದ ಗಿರಿಜೆಗೆ ಮತ್ತೊಮ್ಮೆ "ಗಿರಿಜೆ! ಇನ್ನೂ ಎಚ್ಚರವಾಗಲಿಲ್ಲವೇ ?" ಎಂಬ ಎಚ್ಚರಿಕೆಯ ನುಡಿಯೊಂದು ಕಿವಿಗೆ ಬಿದ್ದು ಎಚ್ಚರವನ್ನುಂಟುಮಾಡಿತು. ಗಿರಿಜೆಯು ಥಟ್ಟನೆದ್ದು ಕುಳಿತು ತಲೆಯೆತ್ತಿ ನೋಡಿದಳು. ಮಾಧವನೂ ಇಲ್ಲ, ರಾಧಾ-ಭಾಮೆಯರೂ ಇಲ್ಲ. ಭ್ರಮೆಗೊಂಡು ತಿರುತಿರುಗಿ ನೋಡಿದಳು ರಾಧಾ-ಭಾಮೆಯರಿಗೆ ಪ್ರತಿಯಾಗಿ ತನ್ನ ತಾಯಿ, ಅಕ್ಕ ಇವರಿಬ್ಬರೂ ಆವುದೋ ಹೊಲಿಯುವ ಕೆಲಸದಲ್ಲಿ ತೊಡಗಿ ಕುಳಿತಿದ್ದುದು ಗೋಚರವಾಯಿತು. ಗಿರಿಜೆಯು ಪ್ರಜ್ಞಾಶೂನ್ಯಳಂತಾಗಿ ತನ್ನೆರಡು ಕೈಗಳಿಂದಲೂ ಮುಖವನ್ನು ಮುಚ್ಚಿಕೊಂಡು ಸುಮ್ಮನೆ ಕುಳಿತಳು.

ಹೊಲಿಯುತ್ತ ಕುಳಿತಿದ್ದ ಗಂಗಾಬಾಯಿಯು ತಂಗಿಯ ಈ ತರದ ವ್ಯಾಪಾರವನ್ನು ನೋಡಿ ಪರಿಹಾಸದಿಂದ ಕೇಳಿದಳು.

"ಗಿರಿ, ಏನುಮಾಡುತ್ತೀ ನೀನು ? ನಿದ್ದೆಗಣ್ಣಿನಲ್ಲಿಯೇ ಕನವರಿಸುತ್ತೀಯೇನು ? ಅಥವಾ ಕನಸು ಕಂಡೇನಾದರೂ ಕಳವಳಿಸುತ್ತೀಯೋ ?

ಗಿರಿಜೆ—(ಮಾತಾಡಲಿಲ್ಲ)

ಗಂಗ—ಮತ್ತೊಮ್ಮೆ ಮೊದಲಿನಂತೆಯೇ ಕೇಳಿದಳು.

ಗಿರಿಜೆ--(ಮೆಲ್ಲನೆ) ಎರಡೂ ನಿಜ ಅಕ್ಕಾ!

ಗಂಗಾ—ಅದೆಂಥ ನಿದ್ದೆ! ಅದೆಂಥ ಕನಸು—ಹಾಗಾದರೆ !

ಗಿರಿಜೆ—ಹಿತಕರವಾದ, ಆಯಾಸಪರಿಹರವಾದ, ಬಹುದಿನದಿಂದ ಬಯಸುತ್ತಿದ್ದ ನಿದ್ದೆ. ಮಾಧವನ ಸಂದರ್ಶನದ ದಿವ್ಯವಾದ ಕನಸು. ಅಕ್ಕಾ! ನನ್ನನ್ನು ಎಚ್ಚರಿಸದವರಾರು ?

ಗಂಗಾ—ನಾನೇ ಕೂಗಿದೆ. ಏಕೆ ? ಕೂಗಬಾರದಾಗಿತ್ತೇನು ?

ಗಿರಿ—(ನಿಟ್ಟುಸುರುಬಿಟ್ಟು) ಇನ್ನೂ ಸ್ವಲ್ಪಹೊತ್ತು ಮಲಗಿ ನೋಡಬೇಕಿತ್ತು !

ಗಂಗಾ—ಸರಿ, ಈಗಾಗಲೇ ನೀನು ಮಲಗಿ ನಾಲ್ಕು ಘಂಟೆ ಹೊತ್ತಾಯಿತು. ಹಗಲು ಹೊತ್ತು ಇನ್ನೂ ಇದಕ್ಕೂ ಹೆಚ್ಚಾಗಿ ನಿದ್ದೆ ಮಾಡುತ್ತೀಯೆಂದು ನಾನೆಣಿಸಿರಲಿಲ್ಲ. ಇಷ್ಟರಲ್ಲಿ ಶೀನಪ್ಪನೂ ಎರಡು ಸಲ ಬಂದು ಕೂಗಿ ಹೋದ. ಅಪ್ಪನೂ ಬಂದು ನೋಡಿಹೋದರು. ನಾನೂ ನಾಲ್ಕು ಸಲ ಕೂಗಿದುದಾಯಿತು.

ಗಿರಿ—ಶೀನಪ್ಪನು ಬಂದು ಏನೆಂದ ? ನಿನಗೇನಷ್ಟು ಅವಸರವಾಗಿತ್ತು?

ಗಂಗಾ—ನನಗೇನವಸರ ? ಗಿರಿ, ನಾವೆಲ್ಲರೂ ಚಪಾತಿ, ಕಾಪೀ ಸಹ ತೆಗೆದುಕೊಂಡೆವು. ನಿನಗೆಂದು ಇಟ್ಟಿದ್ದುದು ಹಾಗೆಯೇ ಆರಿಹೋಗುತ್ತಿದೆ. ಅದ ಕ್ಕೋಸ್ಕರವೇ ಕೂಗಿದೆ. ಶೀನಪ್ಪನೂ ಒಮ್ಮೆ ಕಾಪೀ ಕುಡಿಯಲು ಕೂಗಿದ. ಮತ್ತೊಮ್ಮೆ ಏನೋ ಒಂದು ತಂತಿ ಬಂದಿತ್ತೆಂದು ಹೇಳಿ ಹೋಗಲು ಬಂದಿದ್ದ.

ಗಿರಿ—ಯಾರದು ತಂತಿ ? ಸಮಾಚಾರವೇನು ?

ಗಂಗಾ—ಸಮಾಚಾರ ಒಳ್ಳೇಯದೇ ! ನಿನ್ನ ಗಂಡನೇನೋ ಇಲ್ಲಿಗೆ ಇಷ್ಟರಲ್ಲಿ ಹೊರಟು ಬರುತ್ತಾನಂತೆ. ಆತನ ಕಡೆಯಿಂದಲೇ ತಂತಿ ಬಂದಿರಬೇಕು: ಇನ್ನಾದರೂ ಎಚ್ಚರವಾಗಿದ್ದರೆ ಎದ್ದು ಕೈಕಾಲು ತೊಳೆದುಕೊಂಡುಬಾ, ಹೋಗು.

ಗಿರಿಜೆಯು ಎದ್ದು ಹೋಗಿ ಕೈಕಾಲು ಮೋರೆಗಳನ್ನು ತೊಳೆದುಕೊಂಡು ಹಣೆಗೆ ಕುಂಕುಮವಿಟ್ಟು ಮತ್ತೆ ಬಂದು ಅಕ್ಕನ ಮುಂದೆ ಕುಳಿತಳು.

ಗಿರಿಜೆಯ ತಾಯಿಯು ಎದ್ದುಹೋಗಿ ತಟ್ಟೆ ಬಟ್ಟಲುಗಳಲ್ಲಿರಿಸಿದ್ದ ಚಪಾತಿ ಕಾಪೀ ಸಹ ತಂದು ಗಿರಿಯ ಮುಂದಿರಿಸಿ ತಾನು ತನ್ನ ಕೆಲಸಕ್ಕೆ ಹೊರಟುಹೋದಳು. ಗಿರಿಯು ಕನಸಿನ ವಿದ್ಯಮಾನವನ್ನೇ ನೆನನೆನಸುತ್ತ ಮೆಲ್ಲ ಮೆಲ್ಲನೆ ಚಪಾತಿಯನ್ನು ತಿನ್ನುತ್ತಿದ್ದಳು.

ಗಂಗಾ—ಗಿರಿ ಏನೇನು ಯೋಚನೆ ಮಾಡುತ್ತಿದ್ದೀ ?

ಗಿರಿ—ಕನಸಿನ ವಿಚಾರವನ್ನೇ !

ಗಂಗಾ—ಅದೇನದು ? ನನಗಿಷ್ಟು ಹೇಳು ಕೇಳೋಣ !

ಗಿರಿಜೆಯು ಮಾಧವನಿಗೂ ತನಗೂ ಆದ ಸಂಭಾಷಣವನ್ನು ಮಾತ್ರ ಸಂಗ್ರಹವಾಗಿ ಹೇಳಿದಳು.

ಗಂಗಾ—(ನಗುತ್ತಾ) ಗಿರಿ, ಮಾಧವನು ಸರಿಯಾಗಿಯೇ ಹೇಳಿದ್ದಾನೆ.

ಗಿರಿ—(ದುಗುಡದಿಂದ) ಸರಿಯಾವುದು, ಅಕ್ಕಾ ? ನಂಬಿದವರ ಆಶಾಭಂಗ ಮಾಡುವುದೇ ಸರಿಯೇನು ?

ಗಂಗಾ—ನಂಬಿದವರು ರೀತಿ ನೀತಿಗಳನ್ನು ಬಿಟ್ಟು ಬಯಸಿದುದೆಲ್ಲವನ್ನೂ ಪೂರೈಸಿದರೆ ಮಾತ್ರ ಸರಿಯೆನ್ನುತ್ತೀಯೇನು?

ಗಿರಿ—ರೀತಿ ನೀತಿಗಳನ್ನು ಬಿಟ್ಟವರಾರು?

ಗಂಗಾ—ನೀನು! ನೀನೇ ಹಿಂದು ಮುಂದಾಲೋಚಿಸದೆ ಅತಿರೇಕಕ್ಕೆ ಹೋಗಿರುವಳು.

ಗಿರಿ—ಅಕ್ಕಾ! ಯಾವ ಆಧಾರದ ಮೇಲಿಂದ ಹೀಗೆನ್ನುತ್ತೀ ?

ಗಂಗಾ—ಹುಚ್ಚೀ, ಸಾಕಾರನನ್ನು ನಿರಾಕರಿಸಿ, ನಿರಾಕಾರನಾದ ಪರಂಧಾಮನನ್ನು ಸೇರಬೇಕೆನ್ನುತೀಯಲ್ಲವೇ ?

ಗಿರಿ—ದೇವದೇವನಲ್ಲಿ ಸೇರಿಹೋಗಬೇಕೆನ್ನುವುದೂ ದೋಷವೇ ? ಹಾಗಾದರೆ ಆ ಪರಾತ್ಪರನಲ್ಲಿಯೇ ಸ್ವಸ್ಥಚಿತ್ತರಾಗಿ ಇಹ ಜೀವನವನ್ನು ತುಚ್ಛೀಕರಿಸಿದವರೆಲ್ಲಾ ಹುಚ್ಚರೇ ಅಹುದೇನು ?

ಗಂಗಾ—ಸರ್ವಸಂಗವನ್ನು ಪರಿತ್ಯಾಗಮಾಡಿದವರು ಇಹಸೌಖ್ಯವನ್ನು ತುಚ್ಛೀಕರಿಸಬೇಕಾದುದೂ ಪರಮಾತ್ಮನಲ್ಲಿ ಸೇರಿ ಹೋಗಲೆಳಸುವದೂ ಸರಿಯೆನ್ನಿಸೀತು! ಆದರೆ ಗಿರಿ, ಮೊದಲೇ ಹೇಳಿದನಲ್ಲವೇ ಸಾಕಾರನನ್ನು ನಿರಾಕರಿಸಿದ್ದೀಯೆಂದು! ಯಾವಾತನ ಮೂಲಕವಾಗಿಯೇ ಆ ಪರಮಾತ್ಮನ ಕೃಪೆಗೆ ಪಾತ್ರರಾಗಬೇಕೋ ಆವಾತನನ್ನೇ ಬಿಟ್ಟು ನೀನೇ ಸ್ವತಂತ್ರಿಸಿ ಹೋಗುನೆಸೆಂದರೆ ದೋಷವಲ್ಲವೇ ?

ಗಿರಿ—ಅವರಾಗಿಯೇ ಬಿಟ್ಟು ಕೊಟ್ಟಮೇಲೆ ನಾವೇನು ಮಾಡಬೇಕು ಹಲುಬುತ್ತ ಕುಳಿತಿರಬೇಕೇನು ?

ಗಂಗಾ—ಹುಚ್ಚೀ ! ಅವನು ಬಿಟ್ಟುಕೊಟ್ಟನೆಂದು ಹೇಳಿಲ್ಲ, ಬಿಟುಕೊಟ್ಟಿಲ್ಲ. ಬಿಟ್ಟುಕೊಡಲಿಕ್ಕೆ ಇದೇನು ಸೋಡಚೀಟಿ ಕೊಡುವಳಿಯಾಗಿಲ್ಲ. ಹೀಗಿದ್ದು, ಇಷ್ಟರಲ್ಲಿ ನೀನು ಮನಸ್ಸಿನ ಆಕ್ರೋಶವನ್ನು ತಡೆಯಲಾರದೆ ಅನ್ಯಾಯಕ್ಕೆ ಹೋದರೆ, ನಿನಗೆ ದೇವದೇವನಾದರೂ ಬುದ್ಧಿ ಕಲಿಸಲೇ ಬೇಕಲ್ಲ !

ಗಿರಿ—ಅಕ್ಕಾ! ನಿನೂ ಅದೇ ಮಾತಾಡುತ್ತೀ! ನನ್ನ ಮೇಲೆಯೇ ಆರೋಪ ಹೊರಿಸುತ್ತೀ. ನನ್ನದೇ ಅನ್ಯಾಯವೆಂದು ಖಂಡಿಸುತ್ತೀ. ರೋಷ ಆಕ್ರೋಶಗಳಿಗೆ ನಾನು ಬಲಿ ಬಿದ್ದಿಲ್ಲ ಕಂಡೆಯಾ ? ದೀನನಾಥನನ್ನು ದೈನ್ಯದಿಂದ ಮರೆಹೊಕ್ಕೆನಲ್ಲದೆ ಅಭಿಮಾನದಿಂದ ಬೀಗಿಲ್ಲ.

ಗಂಗಾ—ಅದೆಲ್ಲವೂ ಸರಿಯೇ ಗಿರಿ, ನೋಡಿ ನೀನು ಭಕ್ತಿ ಪರವಶತೆಯಿಂದ ರಾಧಾಮಾಧವನನ್ನು ಭಜಿಸು, ಆತನ ಪ್ರಸನ್ನತೆಯನ್ನು ಸಂಪಾದಿಸು,

ಬೇಡೆನ್ನುವವರಾರು ? ಆದರೆ, ಅದರಲ್ಲಿ ನಿನ್ನ ಕರ್ತವ್ಯ ಧರ್ಮ ಧ್ಯೇಯಗಳ ವಾಸನೆಯನ್ನು ಕೂಡ ನೀನು ಮರೆತುಬಿಟ್ಟರೆ ಮಾತ್ರ ನೆಟ್ಟಗಲ್ಲ.

ಗಿರಿ —(ಹುಬ್ಬುಗಂಟಿಕ್ಕಿ) ಅಕ್ಕಾ! ಕರ್ತವ್ಯ-ಕರ್ತವ್ಯ-ಕರ್ತವ್ಯ !ಅದನ್ನೇ ಗುಣಿಸುತ್ತ ಇಷ್ಟರ ವರೆವಿಗೂ ತಪಿಸಿದ್ದಾಯಿತು. ಏನು ಮಾಡಬೇಕೆನ್ನುತ್ತೀ? ಕಾರ್ಯತಃ ಮಾಡಿ ಸಂತೋಷಪಡಿಸುವದರಿಂದ ಗುಣವೋ ಮನಸ್ಸಿನಲ್ಲಿಯೇ ಮಂಡಿಗೆ ಮಾಡುತ್ತ ಅದೇ ಪುಊರು ಶಬ್ದಗಳನ್ನು ಜಪಿಸುತ್ತಿದ್ದರೆ ಗುಣವೋ ? ಹೇಳು, ಇಷ್ಟುಕಾಲದವರೆಗೂ ಅದೇ ಕರ್ತವ್ಯಕ್ಕಾಗಿ ಹೋಡೆದಾಡಿದ್ದಾಯಿತು. ಇನ್ನು ಅಂತ್ಯದಲ್ಲಿಯಾದರೂ ಆನಂದಮೂರ್ತಿಯ ಮರೆಹೊಗುವೆನೆಂದರೆ ಆಗದೇ ?

ಗಂಗಾ—ಗಿರಿ ಬಿಡು, ನಿನ್ನೀ ಬಡಿವಾರದ ಮಾತನ್ನು ನಾನರಿತಿಲ್ಲವೆನ್ನಬೇಡ. ಇಷ್ಟೆಲ್ಲಾ ಹಾಡುವವಳು, ನಾಳೆ ಆತನೇನಾದರೂ ಬಂದು ಇದಿರಿಗೆ ನಿಂತನೆಂದರೆ, ಆಗ ನಿನ್ನ ರಾಧಾನಾಥನು ಕೂಡ ಮರೆತುಹೋಗುವನು.

ಗಿರಿ— ಅದು ನಿನ್ನ ತಪ್ಪುತಿಳಿವಳಿಕೆ. ಅಂತಹ ಬಯಲ ಭ್ರಮೆ ಇನ್ನೂ ಉಳಿದಿಲ್ಲ. ಅಕ್ಕಾ, ನನ್ನ ರಾಧಾಶ್ಯಾಮನು ಯಾವಾಗಲೂ ನನ್ನ ಹೃದಯದಲ್ಲಿ ನನ್ನ ಕಣ್ಣು ಮುಂದೆ ನಲಿದಾಡುತ್ತಿರುವುದನ್ನು ನೋಡುತ್ತಿದ್ದೇನೆ. (ಇಷ್ಟರಲ್ಲಿ ಶೀನಪ್ಪನೂ ಹೊರಗಿನಿಂದ ಬಂದು ಅಕ್ಕಂದಿರ ಬಳಿ ಕುಳಿತನು.)

ಶೀನು—ಗಂಗಕ್ಕಾ !ಯಾವ ಮಾತದು ! ಬಹು ಜೋರಾಗಿ ನಡೆಯುತ್ತಿತ್ತಲ್ಲಾ !

ಗಂಗಾ—ಶೀನು ಇನ್ನೇನು, ನಿಮ್ಮ ಗಿರಿಯಕ್ಕನು ಎರಡನೇ ಮುಕ್ತಾಬಾಯಿಯಾಗಿದ್ದಾಳೆ.

ಶೀನು—ಮುಕ್ತಾಬಾಯಿಯೋ-ಮಿರಾಬಾಯಿಯೋ ಇರಲಿ. ಗಿರಕ್ಕಾ! ಏನನ್ನುತ್ತೀ ಯಿಾಗ ? ಇನ್ನಾದರೂ ಸಿಟ್ಟು ಕಡಿಮೆಯಾಯಿತಷ್ಟೇ ?

ಗಿರಿ—ಯಾತಕ್ಕೆ ನನಗೆ ಸಿಟ್ಟು! ಶೀನು, ಹೀಗೇಕೆ ಚೇಷ್ಟೆಮಾಡುತ್ತೀ ?

ಶೀನು—ಯಾತಕ್ಕೆ ಸಿಟ್ಟು! ನಿಮ್ಮ ಹೆಂಗಸರಜಾತಿಗೆ ಬಂದದ್ದೇ ಅದು! ಗಂಡನು ಕೆಲಸದಮೇಲಿದ್ದು ಮಾತಾಡಿಸದಿದ್ದರೆ ಸಿಟ್ಟು, ದೂರದೇಶದಲ್ಲಿ ಅಡಚಣೆಯಿಂದ ಕಾಗದ ಬರೆಯುವದು ತಡವಾದರೆ ಸಿಡಿಮಿಡಿ, ಗಳಗಳ, ಉಸುಪಸ್ಸು! ಅವರಿಗೆ ಬೇರೊಂದು ಲಗ್ನವಾಗಿದ್ದು ಹೆಂಡಿರು ಮಕ್ಕಳಿದ್ದರಂತೂ ತೀರಿತೇ ?

ಗಿರಿ – ಶೀನು, ಸುಮ್ಮನೆ ಹೆಂಗಸರ ಜಾತಿಯನ್ನೇ ಎತ್ತಿಯಾಡಬೇಡ.

ನೋಡಹೋದರೆ, ಪುರುಷರ ಜಾತಿಯ ಮೇಲೆಯೂ ಹೊರಲಾಗದಷ್ಟು ಆರೋಪದ ಹೇರು ಬಂದು ಬೀಳುವದು.

ಶೀನು—ಅದೆಲ್ಲಾ ಇರಲಿ ನೀನ್ನ ಗಂಡ ನಾಳೆ ಬರುತ್ತಾನಂತೆ.

ಗಿರಿ—ಯಾರು ಹೇಳಿದರು ?

ಶೀನು—ತಂತೀವರ್ತಮಾನ !

ಗಿರಿ—ಅದೇನು ಇದ್ದಕ್ಕಿದ್ದಹಾಗೆ ತಂತಿ !

ಶೀನು—ನಿನ್ನ ಅಸ್ತ್ರ ಪ್ರಯೋಗದ ಮಹಿಮೆ.

ಗಿರಿ—ನಾನೇನು ಮಾಡಿದೆ ಶೀನು, ನಾನವರಿಗೆ ಪತ್ರವನ್ನು ಕೂಡ ಬರೆದಿಲ್ಲ.

ಶೀನು—ನೀನು ಬರೆಯದಿದ್ದದ್ದೂ ಒಂದು, ನಿನ್ನ ಬಾಯಿಂದ ಹೊರಬಿದ್ದ ವಾಕ್ಯಮಾಲೆ ನನ್ನಿಂದ ವಿಲಿಖಿತವಾಗಿ ಹೋಗಿ ಆತನ ಕೈಸೇರಿದ್ದೊಂದು ಇದೆರಡು ಕಾರಣದಿಂದಲೂ ಆತನ ಮನಸ್ಸು ಉದ್ರಿಕ್ತವಾಗಿರಬಹುದು.

ಗಂಗಾ—ಶೀನು, ಆತನಷ್ಟು ಕಠಿನ ಹೃದಯನು ಮತ್ತೊಬ್ಬರಿಲ್ಲನೇದೂ ಆತನೇ ತನ್ನನ್ನ ನಿರಾಕರಿಸಿ ಬಿಟ್ಟುಬಿಟ್ಟ ಮೇಲೆ ತಾನಾತನ ಹವ್ಯಾಸವನ್ನೇ ಬಿಟ್ಟು ರಾಧಾಮಾಧವನಲ್ಲಿ ಸೇರಿ ಹೋಗಬೇಕೆಂದೂ ನಿನ್ನ ಗಿರಕ್ಕನ ಅಭಿಲಾಷೆ.

ಶೀನು—ಹಾಗೇನು? ಗಿರಕ್ಕಾ! ನಿನ್ನ ಇಷ್ಟ-ಸಂಕಲ್ಪ ಅದಾಗಿದ್ದರೆ ಅದನ್ನೇ ಗಟ್ಟಿಮಾಡು. ಭಾವನು ಬಂದು ಅದನ್ನು ಸಡಲಿಸದಂತೆ ಈಗಲೇ ಬಿಗಿ ಮಾಡಿರು. ಬೇಕಂದರೆ ನಾನೂ ಭಾವನಿಗೆ ಹೇಳಿ ನಿನ್ನ ಸಂಕಲ್ಪವನ್ನು ನಡೆಯಗೊಡುವಂತೆ ಮಾಡುತ್ತೇನೆ.

ಗಿರಿ—(ನಾಚಿಕೆಯಿಂದ ತಲೆತಗ್ಗಿಸಿ) ಸಾಕು ಬಿಡು ಶೀನು, ಇಲ್ಲದ್ದೊಂದು ಹೇಳಬೇಡ.

ಶೀನು—ಹಾಗಾದರೆ ಇದೋ ಬಿಟ್ಟೆ. ಗಿರಕ್ಕಾ! ಸಾಯಂಕಾಲವಾಗಿದೆ, ಹಿತ್ತಿಲ ತೋಟದಲ್ಲಿ ಸ್ವಲ್ಪ ತಿರುಗಾಡಿಕೊಂಡು ಬಂದರೆ ನಿನ್ನ ಪ್ರಕೃತಿಗೆ ಹಿತವಲ್ಲವೆ ?

ಗಿರಿ—ನೀನೂ ಬರುತ್ತೀಯೇನು ?

ಶೀನು—ಇಲ್ಲ, ನಾನು ಹೊರಗೆ ಹೋಗಿ ಬರಬೇಕಾಗಿದೆ. ಅಷ್ಟನು

ಅಲ್ಲಿಯೇ ವೃಂದಾವನದ ಕಟ್ಟೆಯ ಮೇಲೆ ಕುಳಿತಿದ್ದಾರೆ, ಗಂಗಕ್ಕನೊಡನೆ ನೀನೂ ಹೋಗು.

ಶೀನಪ್ಪನು ಹೊರಟು ಹೋದನು. ಗಿರಿಜಾ-ಗಂಗಾಬಾಯಿಯರು ಹಿತ್ತಿಲ ಕಡೆಗೆ ಹೊರಟರು.

ಗಿರಿಜೆಗೆ ಕನಸು ಕಂಡು ಬಂದ ಮರುದಿನ ಅವಳ ಪತಿಯ ಆಗಮನ ನಿರೀಕ್ಷಣೆಯಿತ್ತು. ಶೀನಪ್ಪನು ಭಾವನು ಬರುವನೆಂಬ ಸಂಭ್ರಮದಿಂದ ಎರಡು ಗಾಡಿಗೂ ಹೋಗಿ ನೋಡಿ ಬಂದನು. ಭಾವನು ಬರಲಿಲ್ಲ. ಮನೆಯವರೆಲ್ಲರೂ ಉತ್ಸಾಹಿತರಾಗಿ ಅಳಿಯದೇವನ ಆಗಮನವನ್ನು ಇದಿರು ನೋಡುತ್ತಿದ್ದವರು ಆತನು ಬರಲಿಲ್ಲವೆಂದು ಖಿನ್ನರಾದರು. ಗಿರಿಜೆಯ ಹೃದಯದ ಸ್ಥಿತಿ ಹೇಳುವಂತಿಲ್ಲ. ಅಕ್ಕ ತಮ್ಮಂದಿರಿಗೆ ಉಸಿರೆತ್ತುವಂತಿಲ್ಲ. ಮಾಧವನ ಸಾನ್ನಿಧ್ಯ ವಿನಾ ಮತ್ತೊಬ್ಬರ ಹವ್ಯಾಸವೂ ತನಗೆ ಬೇಕಿಲ್ಲವೆಂದೂ ತನ್ನ ಮನಸ್ಸಿನಲ್ಲಿ ಅದು ಬಲವಾಗಿದೆಯೆಂದೂ ಹೇಳಿದ್ದೇನೋ ಉಂಟು. ಆದರೆ, ಈಗ ಕೇಳಬೇಕಲ್ಲ ಮನಸ್ಸು! ಪತಿಯ ಆಗಮನ ವಾರ್ತೆ ಕಿವಿಗೆ ಬಿದ್ದುದು ಮೊದಲು ಅವಳ ಮನಸ್ಸು ಅವಳ ಅಂಕೆಯಲ್ಲಿರದಂತಾಯಿತು! ಪ್ರತಿಕ್ಷಣವೂ ಯುಗದಂತೆ ತೋರುತ್ತಿದ್ದಿತು. ರಾತ್ರಿಯೆಲ್ಲಾ ಜಾಗರ. ಮರೆತು ಕಣ್ಣು ಮುಚ್ಚಿದಾಗಲೆಲ್ಲಾ ಮಾಧವನ ಸಂದರ್ಶನ ಆದಾದಮೇಲೆ ಪತಿಯ ಸಾಕ್ಷಾತ್ಕಾರವಾದಂತೆ ಭಾವನಾ. ಹೀಗಾಗಿ ರಾತ್ರಿಯೇನೋ ಕಳೆದುಹೋಯಿತು. ಮರುದಿನ ಪತಿಯು ಬರುವನೆಂಬ ಸಡಗರ. ಇದ್ದುದರಲ್ಲಿ ಚಟುವಟಿಕೆಯಿಂದ ತನ್ನ ಕೆಲಸಮಾಡಿಕೊಂಡಳು. ಪತಿಯು ಬಂದರೆ ಆತನಿಗೆ ಅಡಚಣೆಯಾಗದಂತೆ ಸ್ಥಳ, ಸಾಹಿತ್ಯಗಳನ್ನು ಸಿದ್ಧಪಡಿಸಿದಳು. ಗಾಡಿಯ ವೇಳೆಯಾಯಿತು. ತವಕದಿಂದ ಇದಿರುನೋಡುತ್ತಿದ್ದಳು. ಪತಿಯುಬರಲಿಲ್ಲ. ರಾತ್ರಿಗೆ ಬರಬಹುದೆಂಬ ನಿರೀಕ್ಷೆಯುಂಟಾಯಿತು. ರಾತ್ರಿಯೂ ಬರಲಿಲ್ಲ. ಮನಸ್ಸು ವಿವಿಧ ವಿಚಾರಗಳಿಗೆಡೆಯಾಯಿತು. ತನ್ನ ತಂದೆಯ ಬಳಿಗೆ ಹೋಗಿ ಕುಳಿತು ಶಕುನವನ್ನು ಕೇಳಿದಳು. ಪತಿಯು ಆರೋಗ್ಯವಾಗಿರುತ್ತಾನೆಂದು ಶಕುನದಿಂದ ತಿಳಿದು ಮನಸ್ಸಿಗೆ ಸ್ವಲ್ಪ ಸಮಾಧಾನ ತಂದುಕೊಂಡಳು. ಆದಿನ ತಂದೆಯ ಬಳಿಯಲ್ಲಿ ಕುಳಿತು ಯಾವ ಯಾವದೋ ಶಾಸ್ತ್ರ, ನಿಯಮ-ಧರ್ಮ ಆಚಾರಗಳ ವಿಚಾರವನ್ನು ತೆಗೆದು ಅವರಿಂದ ಆಧಾರಸಹಿತವಾದ ಸಮಾಧಾನಕರವಾದ ಉತ್ತರವನ್ನು ಪಡೆದಳು. ಅದರಿಂದ ಮನಸ್ಸಿಗೆ ಸ್ವಲ್ಪ ಉತ್ಸಾಹವಾಯಿತು. ಆ ರಾತ್ರಿಯೂ

ಹಿಂದಿನ ರಾತ್ರಿಯಂತೆಯೇ ಅರ್ಧ ನಿದ್ರಾ-ಅರ್ಧ ಜಾಗ್ರತಾವಸ್ಥೆಯಲ್ಲಿ ಕಳೆಯಿತು, ಮರುದಿನವೂ ಬರಲಿಲ್ಲ. ಮೂರನೇ ದಿನವೂ ಬರಲಿಲ್ಲ. ಕಾಗದವಾಗಲೀ ಸುದ್ದಿಯಾಗಲೀ ಏನೂ ಇಲ್ಲ. ಮನೆಯವರೆಲ್ಲರೂ ಆತನಿಗೆ ಬರಬೇಕೆಂಬ ಇಷ್ಟವಿದ್ದು ಏನೋ ಕಾರ್ಯಗೌರವದಲ್ಲಿ ತೊಡಕಿ ನಿಂತಿರಬಹುದೆಂದು ನಿರ್ಧರಮಾಡಿ ಸುಮ್ಮನಾದರು. ಗಂಗಾಬಾಯಿಯೂ ಸ್ವಸ್ಥಳಕ್ಕೆ ತೆರಳುವದರಲ್ಲಿದ್ದವಳು ಮೈದುನನು ಬರುವನೆಂದು ತಿಳಿದು ಅವನನ್ನು ನೋಡಿ ಹೋಗಬೇಕೆಂದು ನಿಂತಿದ್ದಳು.

ಗಿರಿಜೆಯ ಮನಸ್ಸಿನ ತಾಪವು ಹೆಚ್ಚಾಯಿತು. ಎರಡು ಮೂರು ದಿನಗಳಿಂದ ಜಾಗರಣೆ, ಮನಸ್ಸಿನ ಉದ್ವಿಗ್ನತೆ, ಆಹಾರದ ಮೇಲಿನ ಜಿಗುಪ್ಸೆ. ಇವುಗಳಿಂದ ದೇಹಾಯಾಸವು ಹೆಚ್ಚಿ ಜ್ವರವು ಮತ್ತೆ ಬಲವಾಯಿತು. ಜ್ವರದೊಡನೆ ಕೆಮ್ಮು ದಮ್ಮು, ಎದೆಶೂಲೆ, ತಲೆಶೂಲೆಗಳೂ ಅಶಕ್ತತೆಯಿಂದಾದ ಕೈಕಾಲುಗಳ ನೋವು ನಡುಕಗಳೂ ಹೆಚ್ಚಿದವು. ಹಾಸಿಗೆ ಹಿಡಿದು ಮಲಗಿದಳು. ಮನೆಯವರಿಗೆಲ್ಲಾ ಕಳವಳವಾಯಿತು, ಮತ್ತೆ ವೈದ್ಯರನ್ನು ಕರೆದುಕೊಂಡು ಬಂದು ತೋರಿಸಿದರು. ವೈದ್ಯರೇನು ಮಾಡಬಲ್ಲರು ? ಇದು ಮನಸ್ಸಿನ ಚಿಂತೆಯಿಂದಾದ ರೋಗ, ಮೇಲೆ ಅಶಕ್ತತೆ ಇವೆರಡೇ ಜಾಸ್ತಿಯಾಗಿದೆ. ಶಾರೀರಕ ರೋಗವೇನೂ ಹೆಚ್ಚಿಲ್ಲವೆಂದು ಹೇಳಿ ಔಷಧವನ್ನು ಕೊಟ್ಟು ಹೋದರು. ಗಂಗಾಬಾಯಿಯ ಪಯಣವೂ ನಿಂತಿತು.

ಗಿರಿಜೆಯ ಸ್ವಾಮಿ ಯೋಗಾನಂದನು ಬರುತ್ತೇನೆಂದು ತಾರು ಬಿಟ್ಟು ಒಂದು ವಾರ ಕಳೆದು ಹೋಯಿತು. ಆತನೂ ಬರಲಿಲ್ಲ, ಮತ್ತೆಸುದ್ದಿಯೂ ಇಲ್ಲ. ತಾರು ಬಂದ ೮ನೆ ದಿನ ಬೆಳಗಿನಗಾಡಿಯಲ್ಲಿ ಯೋಗಾನಂದನು ಬಂದನು. ಸುಳಿವನ್ನೂ ಕೊಡದೆ ಬಂದು ಇದಿರಾಗಿ ನಿಂತ ಅಳಿಯ ದೇವನನ್ನು ನೋಡಿ, ಗಿರಿಯ ತಂದೆ ವೆಂಕಟೇಶಯ್ಯನಿಗೆ ಅತ್ಯಾನಂದವೂ ವಿಸ್ಮಯವೂ ಉಂಟಾಗಿಸಡಗರದಿಂದೆದ್ದು ಜಾಮಾತನ ಕರಗಳನ್ನು ಹಿಡಿದು ಅಲುಗಿಸಿ ಕುಶಲಪ್ರಶ್ನೆ ಮಾಡಿದನು. ಶೀನಪ್ಪನು ಸ್ನಾನ ಮಾಡುತ್ತಿದ್ದುದರಿಂದ ಆಗಲೇ ಬರಲಾಗಲಿಲ್ಲ. ಹುಡುಗರೂ ಗಿರಿಯತಾಯಿ ಅಕ್ಕಂದಿರೂ ಬಂದು ಯೋಗಕ್ಷೇಮವನ್ನು ವಿಚಾರಿಸಿದರು. ಆದರೆ, ಪಾಪ ಇನ್ನೂ ಗಿರಿಗೆ ಸುದ್ದಿ ತಿಳಿದಿಲ್ಲ. ಆಯಾಸದಿಂದ ಮಲಗಿದ್ದಳು. ಗಿರಿಯ ತಂದೆಯು ಸಣ್ಣ ಹುಡುಗರ ಮೂಲಕ ಗಿರಿಗೆ ಭಾವ ಬಂದರೆಂದು ತಿಳಿಸಲು ಹೇಳಿ ಕಳಹಿದನು. ಹುಡುಗರು ಬಂದ ತಿಳಿಸಿದೊಡನೆ ಗಿರಿಗೆ ಏನಾಯಿತೋ ಹೇಳಲಾಗುವಂತಿಲ್ಲ. ಕಣ್ಣುಗಳಿಂದ ನೀರು ಬಂದಿತು, ಉಸಿರಾಡುವುದು ವೇಗವಾಯಿತು, ಏಳಹೋ

ದಳು ಕೈ ಕಾಲುಗಳು ತರತರ ನಡುಗಿದವು. ಹಾಗೆಯೇ ಮಲಗಿ ಸುದ್ದಿಯನ್ನು ತಂದ ಹುಡುಗರ ಮೂಲಕ ತಾನಿರುವ ಕಡಗೇ ಬರಹೇಳಿ ಕಳುಹಿದಳು.

ಇಷ್ಟರಲ್ಲಿ ಯೋಗಾನಂದನ ಸಾಮಾನುಗಳನ್ನು (ಒಂದುಹಾಸಿಗೆ, ಒಂದು ಸಣ್ಣ ಪೆಟ್ಟಿಗೆ, ಒಂದು ತಂಬಿಗೆ-ಇಷ್ಟೆ) ತಂದು ಒಳಗಿರಿಸಿದ್ದಾಗಿತ್ತು, ಯೋಗಾನಂದನು ಪತ್ನಿಯು ಇದಿರಿಗೆಕಾಣಲಿಲ್ಲವೆಂದು ಭೀತನಾದನು. ಅಷ್ಟರಲ್ಲಿ ಮಾವನು ಹುಡುಗರಲ್ಲಿ ಹೇಳಿದಮಾತಿನಿಂದ ಮನಸ್ಸಿನವೇಗವನ್ನು ಸ್ವಲ್ಪಮಟ್ಟಿಗೆ ತಡೆದು ಅಲ್ಲಿದ್ದವರೊಡನೆ ಮಾತನಾಡುತ್ತ ನಿಂತನು. ಅತ್ತೆಯು ಬಹಳ ಹೊತ್ತು ನಿಲ್ಲದೆ ಅಳಿಯನಿಗೆ ಕೈಕಾಲುಗಳನ್ನು ತೊಳೆದುಕೊಳ್ಳ ಹೇಳಿ ಅಡಿಗೆ ಮನೆಯ ಕಡೆಗೆ ಹೋದಳು.

ಗಂಗಾಬಾಯಿಯು ನಗುತ್ತ—ಭಾವಯ್ಯ (ಮರ್ಯಾದೆಗಾಗಿ ಹೀಗೆ ಕರೆದಳು) ನೀವೇನು ಹೇಳಿದ ವೇಳೆಗೆ ಒಂದು ಘಳಿಗೆ ಹಿಂದು ಮುಂದು ಮಾಡುವವರಲ್ಲ.

ಯೋಗಾ—(ನಗುತ್ತ) ನಾನೇನು ಮಾಡಲಿ ತಾಯಿ, ಏನೇನೋ ನೂರೆಂಟು ಗೊಂದಲದಲ್ಲಿ ತೊಡಕಿ ಬೀಳಬೇಕಾಯಿತು. ಆದರೂ, ಒಂದು ವಾರದ ಅಂದರದಲ್ಲಿಯೇ ಬಂದು ಹಾಜರಾಗಿದ್ದೇನಲ್ಲಾ.

ಗಂಗಾ—ಅದೇನೋ ನಿಜ. ಅಷ್ಟಕ್ಕೇ ಸಂತೋಷಪಡುತ್ತೇವೆ. ನಾನೂ ಊರಿಗೆ ಹೊರಟಿದ್ದವಳು, ನಿಮ್ಮನ್ನು ನೋಡಿ ಹೋಗೋಣವೆಂದೇ ನಿಂತಿದ್ದೇನೆ.

ಯೋಗಾ—ತುಂಬ ಸಂತೋಷ, ಎಲ್ಲರೂ ಸೌಖ್ಯವಷ್ಟೆ ?

ಗಂಗಾ—(ನಗುತ್ತ) ಎಲ್ಲರೂ ನಿಮ್ಮ ಇದಿರಿಗೇ ಬಂದಿದ್ದರಲ್ಲ. ನೋಡಲಿಲ್ಲವೇ ?

ಯೋಗಾ—(ಮುಗುಳು ನಗೆಯಿಂದ) ಬಂದಿದ್ದವರನ್ನೆಲ್ಲಾ ನೋಡಿದೆ, ಆದರೇ-

ಗಂಗಾ—ಆದರೇ-ಭಾವಯ್ಯ! ನಿಮ್ಮ 'ಆದರೆ' ಯನ್ನು ನೋಡಬೇಕಾದರೆ ಒಳಗೆ ಹೋಗಬೇಕು. ಅವಳೂ ಇದ್ದುದರಲ್ಲಿ ನೆಟ್ಟಗಿದ್ದಾಳೆ.

ಯೋಗಾನಂದನು ಪತ್ನಿಯ ಬಳಿಗೆ ಹೊರಡಲನುವಾಗುವಷ್ಟರಲ್ಲಿ ಹುಡುಗರೂ ಗಿರಿಯ ಕಡೆಯಿಂದ ಕರೆಯನ್ನು ತಂದು ಮುಟ್ಟಿಸಿದರು. ಅಷ್ಟರಲ್ಲಿ ಶೀನಪ್ಪನು ಬಂದು ಭಾವನನ್ನು ಅತ್ತಿತ್ತ ಬಿಡದೆ ಕೈಕಾಲು ತೊಳೆದುಕೊಂಡು ಬರಲಿಕ್ಕೆ

ಬಚ್ಚಲ ಮನೆಯ ಕಡೆಗೆ ಕರೆದೊಯ್ದನು.

V

ಯೋಗಾನಂದನು ಕೈಕಾಲು ತೊಳೆದುಕೊಂಡು ಬರುವಷ್ಟರಲ್ಲಿ, ಗಿರಿಯ ಕೋಣೆಯಲ್ಲಿ ಗಿರಿಯು ಮಲಗಿದ್ದ ಮಂಚದ ಹತ್ತಿರದ ಕುರ್ಚಿಯ ಮುಂದಿನ ಸಣ್ಣದೊಂದು ಕಾಲುಮಣೆಯ ಮೇಲೆ ಕಾಫೀ, ಫಲಹಾರದ ಬಟ್ಟಲು ತಟ್ಟೆ ಸಹ ಸಿದ್ಧವಾಗಿದ್ದುವು ಮತ್ತು ಕೈಯೊರಿಸಿಕೊಳ್ಳಲಿಕ್ಕೆ ವಸ್ತ್ರವೂ ಒಂದು ಸಣ್ಣ ಪಾತ್ರೆಯಲ್ಲಿಷ್ಟು ನೀರೂ ಇದ್ದುವು. ಯೋಗಾನಂದನು ಮೈದುನನೊಡನೆ ಪತ್ನಿಯ ಕಿರುಮನೆಗೆ ಬಂದನು. ಅಷ್ಟರಲ್ಲಿ ಗಿರಿಜೆಯು ಪ್ರಕೃತಿಸ್ಥಳಾಗಿ ಎದ್ದು ಗೋಡೆಯನ್ನು ಆತು ಕುಳಿತಿದ್ದಳು. ಪತಿಯು ಮುಂದೆಬಂದು ನಿಂತಕೂಡಲೇ ಏಳಹೋದಳು. ಆದರೆ ಅವಳಿಗೆ ಏಳಲಿಕ್ಕೆ ಆಗಲಿಲ್ಲ. ಆತನೂ ಅಷ್ಟಕ್ಕೆ ಅವಕಾಶ ಕೊಡಲಿಲ್ಲ. ತಾನೂ ಅವಳ ಮಂಚದ ಮೇಲೆಯೇ ಕುಳಿತು, ಅವಳ ತೋಳುಗಳನ್ನು ಹಿಡಿದು ಕುಳ್ಳಿರಿಸಿದನು.

ಶೀನಪ್ಪ—ಭಾವ! ಉಳಿದವರ ಉಪಚಾರವೆಲ್ಲಾ ಸಾವಕಾಶವಾಗಿ ನಡೆಯಲಿ. ಮೊದಲು ಫಲಹಾರ ಮಾಡಿರಿ, ಕಾಫಿಯನ್ನು ಕುಡಿಯಿರಿ, ಆರಿಹೋಗುತ್ತದೆ.

ಯೋಗಾ—(ನಗುತ್ತಾ) ನಾನ್ಯಾರ ಉಪಚಾರ ಮಾಡಿದೆ. ಏಳಹೋದಳು, ಸುಮ್ಮನೆ ಯಾಕೆ ಏಳಬೇಕೆಂದು ತಡೆದು ಕುಳ್ಳಿರಿಸಿದೆ ಅಷ್ಟೆ.

ಶೀನಪ್ಪ—ಸಿಧಾನವಾಗಿ ನಿಮ್ಮ ಫಲಹಾರವಾಗಲಿ. ನಾನಿನ್ನೂ ಮಾಧ್ಯಾಹ್ನಿಕ ಮಾಡಿಲ್ಲ, ಹೋಗುತ್ತೇನೆ. ನಿಮ್ಮ ಪತ್ನಿಯೇ ಹತ್ತಿರದಲ್ಲಿರುವದರಿಂದ ನಿರಾತಂಕವಾಗಿ ಕುಳಿತು ಫಲಾಹಾರಮಾಡಿರಿ. ಎಂದು ಹೇಳಿ ಹೊರಟುಹೋದನು.

ಗಿರಿ—ಕಾಫೀ ಆರಿಹೋಗುತ್ತದಲ್ಲ ?

ಯೋಗಾ—ಏನೂ ಇಲ್ಲ, ಈಗ ತೆಗೆದುಕೊಳ್ಳುತ್ತೇನೆ. ನಿನಗಾಗಿದೆಯೇನು?

ಗಿರಿ—ನನಗಾಗಿ ಎಷ್ಟೋ ಹೊತ್ತಾಗಿದೆ.

ಯೋಗಾನಂದನು ಫಲಾಹಾರದ ತಟ್ಟೆಯನ್ನು ಇರಿಸಿದ್ದ ಕಾಲುಮಣೆಯನ್ನು ಮಂಚದ ಹತ್ತಿರಕ್ಕೆ ಸರಿಸಿಕೊಂಡು ಪತ್ನಿಯೊಡನೆ ಮಾತನಾಡುತ್ತ ಬಲಾತ್ಕಾರದಿಂದ ಅವಳಿಗೂ ಸ್ವಲ್ಪಸ್ವಲ್ಪವಾಗಿ ಕೊಡುತ್ತ ತಾನೂ ತೆಗೆದುಕೊಳ್ಳುತ್ತಿದ್ದನು.

ಗಿರಿಗೆ ಆಹಾರವೇನೂ ಬೇಕಾಗಿರಲಿಲ್ಲ. ಮೇಲಾಗಿ ಪತಿಯ ಆಗಮನದ

ಆನಂದವು ತಾನೇ ತಾನಾಗಿ ಹೋಗಿದೆ. ಆದರೂ ಪತಿಯ ಒತ್ತಾಯಕ್ಕೆ ಕಟ್ಟು ಬಿದ್ದು, ಬೇಕಾಗಿಲ್ಲದಿದ್ದರೂ ಸ್ವಲ್ಪ ಸ್ವಲ್ಪವಾಗಿ ತೆಗೆದುಕೊಳ್ಳುತ್ತಿದ್ದಳು. ಕಡೆಗೆ "ನನಗೆ ಸಾಕಿನ್ನು, ಹೊಟ್ಟೆ ಭಾರವಾಗಿ ಹೋಯಿತು" ಎಂದಳು.

ಯೋಗಾ—"ಒಬ್ಬನೇ ತಿನ್ನಲೇನು' ನನಗೂ ಸಾಕಾಯಿತು ಬಿಡು." ಎಂದು ಕಾಫಿಯನ್ನು ಕುಡಿಯ ತೊಡಗಿದನು.

ಗಿರಿ—ಎಂದೂ ನಾನಿಷ್ಟು ತಿಂದಿರಲಿಲ್ಲ. ನನಗೆ ಪಚನವಾಗುವುದಿಲ್ಲ. ಇಷ್ಟಕ್ಕೆ ತಾವೂ ಬಿಟ್ಟುಬಿಡಬೇಕೇನು ?

ಯೋಗಾ—ನೀನು ಬಿಟ್ಟೆಯೆಂದು ನಾನು ಬಿಡಲಿಲ್ಲ. ನನಗೂ ಸಾಕಾಯಿತು. ಎಂದು ಮತ್ತೆ ಒಂದೆರಡು ಬಾರಿ ತಟ್ಟೆಯೊಳಗಿದ್ದುದನ್ನು ಬಾಯಿಯಲ್ಲಿ ಹಾಕಿಕೊಂಡು ಕಾಫಿ ಕುಡಿದು ,ಕೈತೊಳೆದುಕೊಂಡನು. ಗಿರಿಗೆ ಬಹಳಹೊತ್ತು ಕುಳಿತಿದ್ದುದರಿಂದ ಬೆನ್ನು ಸೆಳೆದು ಎದೆಯಲ್ಲಿ ನೋವು ಕಂಡುಬಂದು ಹಾಗೆಯೇ ಮಲಗಿದಳು. ಯೋಗಾನಂದನು ಪತ್ನಿಯನ್ನೂ ಕೈಯನ್ನೂ ಮುಟ್ಟಿನೋಡಿದನು. ಜ್ವರವಷ್ಟೇನೂ ವೇಗವಾಗಿರಲಿಲ್ಲ. ಮೈಮುಟ್ಟಿನೋಡಿದನು. ಜ್ವರದ ತ್ರೀವ್ರತೆಯೇನೂ ಇಲ್ಲವೆಂದು ತಿಳಿಯಬಂದಿತು. ಹಾಗೆಯೇ ಅವಳ ಕೈಹಿಡಿದು ಹಿಸುಕುತ್ತ ಕೇಳಿದನು. "ಗಿರಿ! ನಿನಗೀಗ ಆಗಿರುವದಾದರೂ ಏನು ?

ಗಿರಿ—ನನಗೆ ಮತ್ತೇನೂ ಆಗಿಲ್ಲ. ಏನೋ ಸ್ವಲ್ಪ ಅಹುದೋ ಅಲ್ಲವೋ ಎನ್ನುವಷ್ಟು ಜ್ವರ-ತಲೆಶೂಲೆ, ಇಷ್ಟೇ! ಮತ್ತೇನೇನೂ ಇಲ್ಲ.

ಯೋಗಾ—ಇಷ್ಟಕ್ಕೇ ಹೀಗೆ ಕೃಶವಾಗುತ್ತೀಯೇನು! ದೇಹದಲ್ಲಿ ಏನೇನೂ ಉಳಿದಿಲ್ಲ. ಎಂಥ ಗಟ್ಟಿಮುಟ್ಟಾದ ಮೈ ಹೇಗೆ ಮೆತ್ತಮೆತ್ತಗೆ ಹತ್ತಿಬತ್ತಿಯಂತೆ ಹೀರಿ ಹಿಪ್ಪೆಯಾಗಿ ಹೋಗಿದೆ. ಹೀಗಾಯಿತೇಕೆ?"

ಗಿರಿ—ಏಕೆಂದರೆ, ನಾನೇನು ಹೇಳಬೇಕು.

ಯೋಗಾ—ವೈದ್ಯರು ನೋಡಿ ಏನು ಹೇಳಿದರು ? ಯಾವ ಕಾಹಿಲೆಯೆಂದರು ?

ಗಿರಿ—ಸರಿ, ಅವರ ಮಾತನ್ನು ತೆಗೆದುಕೊಂಡು ಮಾಡುವದೇನು? ಕಾಹಿಲೆಯಿಲ್ಲ ಏನೂ ಇಲ್ಲ.

ಯೋಗಾನಂದನು ಮಾತಾಡದೆ, ಎವೆಯಿಕ್ಕದೆ ಪತ್ನಿಯು ಮುಖವನ್ನೇ ನೋಡುತ್ತ ಕುಳಿತನು. ಆತನ ಮನಸ್ಸಿಗೆ ಏನುಹೊಳೆದಿತೋ ದೇವರಿಗೇಗೊತ್ತು.

ಕೊರಳು ಕಟ್ಟಿತ್ತು, ಕಣ್ಣಿನಲ್ಲಿ ನೀರು ತುಂಬಿತು; ಹಾಗೆಯೇ ಮುಖವನ್ನು ಬೇರೆ ಕಡೆಗೆ ತಿರುಗಿಸಿಕೊಂಡನು.

ಗಿರಿಯು ಪತಿಯ ಈ ಬಗೆಯ ವ್ಯಾಪಾರವನ್ನು ನೋಡಿ ಗಾಬರಿಯಾಗಿ ಪತಿಯ ಕೈಗಳನ್ನು ಬಿಗಿಯಾಗಿ ಹಿಡಿದೆಳೆದು ತನ್ನ ಕಡೆಗೆ ತಿರುಗಿಸಿಕೊಂಡಳು.

ಗಿರಿ—ಇದೇನು ಮಾಡುತ್ತೀರಿ ?

ಯೋಗಾ—ಏನೋ ವಿಚಾರಮಾಡುತ್ತಿದ್ದೆ.

ಗಿರಿ —ಏನು ವಿಚಾರ? ಅಲ್ಲಿ ಎಲ್ಲರೂ ಸೌಖ್ಯವಷ್ಟೆ ?

ಯೋಗಾ—ಅಲ್ಲೆಲ್ಲಾ ಸೌಖ್ಯವಾಗಿದೆ. ನಿನ್ನ ದೇಹಾರೋಗ್ಯದ ವಿಚಾರವೇ ನಿನ್ನ ರೋಗಕ್ಕೆ ಕಾರಣವೇನೆಂಬ ವಿಚಾರವೇ ವಿಚಾರವಾಗಿಹೋಗಿದೆ.

ಗಿರಿ—ಅದಕ್ಕಿಷ್ಟು ಏಕಾಗ್ರತೆಯಿಂದ ಧ್ಯಾನಮಾಡಬೇಕೇನು ? ದೇವರ ಇಚ್ಛೆಯಲ್ಲಿದ್ದಂತಾಗುವದೆಂದು ಸಮಾಧಾನದಲ್ಲಿರಬಾರದೇನು ?

ಯೋಗಾ ದೇವರ ಇಚ್ಛೆಯಿದ್ದಂತೆಯೇ ಆಗುವದು ನಿಜ, ಆದರೂ ನಮ್ಮ ಪುರುಷ ಪ್ರಯತ್ನವನ್ನು ಲೋಪವಿಲ್ಲದೇ ಮಾಡಬೇಕಲ್ಲ.

ಗಿರಿ —ಯಾರ ಪ್ರಯತ್ನವನ್ನು ನಡೆಯಗೊಡಲಿಕ್ಕೂ ದೈವವೇ ಕಾರಣವು. ಆಗುವದು ಆಗುತ್ತದೆ ಹೋಗುತ್ತದೆ. ಇದಕ್ಕೇಕೆ ಇಷ್ಟೊಂದು ವಿಚಾರ, ಪರಿತಾಪ, ಕಣ್ಣೀರು ಇವೆಲ್ಲಾ ?

ಯೋಗಾ—ಗಿರಿ, ನಿನ್ನ ಈ ತರದ ಮರ್ಮಭೇದಕವಾಕ್ಯವನ್ನು ಸಾಕು ಮಾಡು. ಒಂದೇ ಸಡವೆಗೆ ಇಷ್ಟು ಕ್ರೂರ ವಾಗ್ಬಾಣವನ್ನು ಪ್ರಯೋಗಿಸಬೇಡ. ನೀನು ಊಹಿಸಿರುವಷ್ಟುಮಟ್ಟಿಗೆ ನಾನು ನಿಷ್ಠುರನಾಗಿದ್ದರೆ ಇದನ್ನೇನೂ ಲಕ್ಷ್ಯ ಮಾಡುತ್ತಿರಲಿಲ್ಲ ಕಂಡಿಯಾ ? ನೀನೇನೂ ಇದನ್ನು ತಿಳಿಯದವಳಲ್ಲ; ಅರಿಯದ ಹುಡುಗಿಯೂ ಅಲ್ಲ. ಮೇಲಾಗಿ ನನ್ನ ಸ್ಥಿತಿಗತಿಗಳೆಲ್ಲವನ್ನೂ ಚನ್ನಾಗಿ ತಿಳಿದಿದ್ದು ಹೀಗನ್ನುವದಾದರೆ ನಾನೇನು ಹೇಳಲಿ ?

ಗಿರಿ—(ಪತಿಯ ಕೈಗಳನ್ನು ಕಣ್ಣಿಗೆ ಒತ್ತಿಕೊಳ್ಳುತ್ತ) ನನ್ನ ಸಾಧಾರಣವಾದ ಈ ಮಾತು ಇಷ್ಟು ತಾಪವುಂಟುಮಾಡಿತೇ ? ನನ್ನಾಣೆಗೂ ನಾನೇನು ಬೇರೆಯಾಗಿ ಎಣಿಸಿಲ್ಲ, ಆದರೂ ಕ್ಷಮೆಯನ್ನು ಕೇಳುತ್ತೇನೆ. ಈಗ ನಾನು ಹೇಳಿದುದನ್ನು ಮರೆತುಬಿಡಬೇಕು. (ಎಂದು ಅತ್ತುಬಿಟ್ಟಳು)

ಯೋಗಾನಂದನು ಪತ್ನಿಯ ಕಣ್ಣೊರಸಿ ಸಮಾಧಾನಮಾಡಿ. ಗಿರಿ! ನಿನ್ನ

ರೋಗವೇನೆಂಬುದು ನನಗೆ ತಿಳಿದುಹೋಗಿದೆ. ಇನ್ನು ನಾನದನ್ನು ಹತೋಟಿಗೆ ತರಬಲ್ಲೆ. ಧೈರ್ಯವಾಗಿರು ಗಿರಿ, ಇನ್ನು ಮುಂದೆ ಹೀಗಾಗುವುದಿಲ್ಲ. (ಇಷ್ಟರಲ್ಲಿ ಹುಡುಗರು ಸ್ನಾನಕ್ಕೆ ಎಬ್ಬಿಸಿದುದರಿಂದ ಯೋಗಾನಂದನು ಎದ್ದು ಹೋದನು.)

## VI

ಸ್ನಾನ, ಊಟ, ಉಪಚಾರಗಳೆಲ್ಲವೂ ಆದಮೇಲೆ ಭಾವಮೈದುನರಿಬ್ಬರೂ ಕೆಲ ಹೊತ್ತು ಮಾತನಾಡುತ್ತಿದ್ದರು. ಆಮೇಲೆ ಯೋಗಾನಂದನು ಮೊದಲು ದಿನ ರಾತ್ರಿಯೆಲ್ಲಾ ನಿದ್ದೆಗೆಟ್ಟಿದ್ದುದರಿಂದ ಮಲಗಿ ನಿದ್ರಿಸಿದುದಾಯ್ತು. ಸಾಯಂಕಾಲ ೪ ಘಂಟೆಗೆ ಎದ್ದು ಮತ್ತೆ ಹಣ್ಣು, ಟೀ, ಸಹ ತೆಗೆದುಕೊಂಡು, ಮಾಪ ಮೈದುನರ ಕೂಡ ಸ್ವಲ್ಪಹೊತ್ತು ಸಂಭಾಷಿಸುತಿದ್ದು ಆಮೇಲೆ ಮೈದುನನೊಡನೆ ಹೊರಗೆ ತಿರುಗಾಡಿ ಬರಲು ಹೋಗಿದ್ದನು. ಅಲ್ಲಿಂದ ಬಂದೊಡನೆ ರಾತ್ರಿ ಊಟ ಉಪಚಾರಗಳಾದುವು. ಹೀಗಾಗಿ ಗಿರಿಜಾ-ಯೋಗಾನಂದರು ಹಗಲು ಮಾತನಾಡಲು ಅವಕಾಶವೇ ಆಗಲಿಲ್ಲ.

ಯೋಗಾನಂದನು ಊಟಮಾಡಿ ಮೈದುನನೊಡನೆ ಮಾತನಾಡುತ್ತಲಿರುವಾಗ ಗಿರಿಜೆಯು ರಾತ್ರಿ ಊಟವನ್ನು ಮಾಡಿಕೊಂಡು ಬಂದು ಮಲಗಿದಳು. ನಾಲ್ಕಾರು ದಿನಗಳಿಂದ ಮನಸ್ಸಿನ ಚಿಂತೆ, ರೋಗದ ಬಾಧೆಗಳಿಂದ ನಿದ್ದೆಯಿಲ್ಲದಿದ್ದು, ಈ ದಿನ ಜ್ವರವೂ ಆರಿ, ಮನಸ್ಸೂ ಪ್ರಸನ್ನವಾಗಿದ್ದುದರಿಂದ ಮಲಗಿದೊಡನೆ ಮೈಮರೆತು ನಿದ್ದೆಹೋದಳು.

ಗಂಗಾಬಾಯಿಯು ಕೆಲಸವೆಲ್ಲಾ ಮುಗಿದು ಮಲಗಲಿಕ್ಕಾಗಿ ಬಂದು ತಂಗಿಯನ್ನು ನೋಡಿ ಹೋಗಲು ಬಂದಾಗ ಗಿರಿಜೆಗೆ ನಿದ್ರೆ ಹತ್ತಿದ್ದಿತು. ಎಚ್ಚರಿಸಬಾರದೆಂದು ಗಿರಿಜೆಗೂ ಯೋಗಾನಂದನಿಗೂ ಹಾಲನ್ನು ತಂದು ಕಾಲುಮಣೆಯ ಮೇಲಿರಿಸಿ, ಶೀನಪ್ಪನ ಓದುವ ಕೋಣೆಗೆ ಹೋಗಿ ನೋಡಿದಳು. ಅಲ್ಲಿ ಶೀನಪ್ಪನೂ ಯೋಗಾನಂದನೂ ಕುಳಿತು ಇನ್ನೂ ಮಾತನಾಡುತ್ತಿದ್ದರು. ಗಂಗಾಬಾಯಿಯು ಬಂದು ನಿಂತುಕೊಂಡಳು.

ಶೀನಪ್ಪ—ಅಕ್ಕಾ! ನಿನ್ನ ಕೆಲಸವೆಲ್ಲಾ ಆಯಿತೇನು ?

ಗಂಗಾ—ಎಲ್ಲಾ ಆಗಿದೆ, ಮಲಗಬೇಕೆಂದು ಹೊರಟಿದ್ದವಳು ನೀವಿನ್ನೂ ಮಾತಾಡುತ್ತಿದ್ದುದನ್ನು ಕೇಳಿ ಇಲ್ಲಿಗೆ ಬಂದೆ. ಶೀನು, ರಾತ್ರಿಯೆಲ್ಲಾ ನಿದೆ

ಗೆಟ್ಟು ಬಂದಿರುವ ಭಾವಮೈದುನನ್ನೂ ಕುಳ್ಳಿರಿಸಿಕೊಂಡು ಕುಳಿತಿರುತ್ತೀಯೋ. ಹೊತ್ತು ಬಹಳವಾಗಿದೆ, ಮಲಗಬಾರದೇ ?

ಯೋಗಾ—ನಾನೇ ಕುಳಿತಿದ್ದೇನೆ ಹೊರತು ಶೀನಪ್ಪನೇನೂ ಹಿಡಿದು ಕುಳ್ಳಿರಿಸಿಕೊಂಡು ಕುಳಿತಿಲ್ಲ. ಮಧ್ಯಾಹ್ನವೆಲ್ಲಾ ಮಲಗಿದ್ದೆನಾದ್ದರಿಂದ ಈಗಲೇ ನಿದ್ದೆ ಬರುವುದಿಲ್ಲ ನೀವೆಲ್ಲಾ ಮಲಗಬಹುದಲ್ಲವೆ ?

ಗಂಗಾ—ನಾವು ಮಲಗುತ್ತೇವೆ. ಭಾವ, ನಿಮಗೆ ಗಿರಿಯ ಕೋಣೆಯಲ್ಲಿಯೇ ಹಾಸಿಗೆ ಹಾಸಿರುವದು.

ಯೋಗಾ—ನಾನು ಇಲ್ಲಿಯೇ ಮಲಗುತ್ತೇನೆ. ನೀವೇ ಅಲ್ಲಿ ಮಲಗಿರಿ !

ಗಂಗಾ—ನಾನೂ ಅಮ್ಮನೂ ಪಕ್ಕದ ಕೋಣೆಯಲ್ಲಿಯೇ ಮಲಗುತ್ತೇವೆ. ಗಿರಿಯ ಕೋಣೆಯ ಒಂದು ಕೊನೆಯಲ್ಲಿ ನಿಮಗೆ ಹಾಸಿಗೆ ಹಾಸಿರುತ್ತದೆ. ನೀವೇನೂ ಸಂಕೋಚಪಡಬೇಕಾಗಿಲ್ಲ. (ನಸುನಗುತ್ತ) ಭಾವ, ಮಧ್ಯಾಹ್ನದಿಂದ ಗಿರಿಯ ಕೂಡ ನೀವು ಮಾತಾಡಿದಂತೆಯೂ ಕಾಣಲಿಲ್ಲ! ಈಗ ನಿಧಾನವಾಗಿ ಮಾತನಾಡಿ, ಅವಳಿಗೆ ಹಿಡಿದಿರುವ ಹುಚ್ಚು ಪಿಶಾಚವನ್ನು ಓಡಿಸಬೇಕಲ್ಲವೆ ?

ಶೀನಪ್ಪ—(ಭಾವನ ಬೆನ್ನಮೇಲೆ ಕೈಯಿರಿಸಿ) ನಿಜ ಭಾವ, ಗಿರಿಯಕ್ಕನಿಗೆ ದೊಡ್ಡಭೂತವೊಂದು ಹಿಡಿದಿರುತ್ತದೆ. ಅದನ್ನು ಓಡಿಸಲು ನಮಗಾರಿಗೂ ಶಕ್ಯವಿಲ್ಲ, ನೀನೇ ಮೊದಲು ಆ ಭೂತದ ಕೈಯಿಂದ ಅವಳನ್ನು ಬಿಡಸಬೇಕು. ಇದರ ಮೇಲೆ ಇಲ್ಲಿ ಒಬ್ಬನೇ ಮಲಗುವ ಬದಲು ಅದೇ ಕೋಣೆಯಲ್ಲಿಯೇ ಮಲಗಿದರಾಯಿತು.

ಗಂಗಾ—ಭಾವ, ನಾನು ಹೋಗಿ ನೋಡಿದಾಗ ಗಿರಿಗೆ ನಿದ್ದೆಬಂದಿತ್ತು. ಅವಳಿಗೂ ನಿಮಗೂ ಹಾಲನ್ನು ತಂದು ಮೇಜಿನ ಮೇಲಿರಿಸಿರುತ್ತೇನೆ. ಇಬ್ಬರೂ ತೆಗೆದುಕೊಳ್ಳಿರಿ, ಹೀಗೆ ಹೇಳಿ ಗಂಗೆಯು ಹೊರಟು ಹೋದಳು. ಶೀನಪ್ಪನೂ ಯೋಗಾನಂದನನ್ನು ಮಲಗಲಿಕ್ಕೆ ಹೇಳಿ ಎದ್ದು ಹೋದನು.

ಯೋಗಾನಂದನು ಅಲ್ಲಿಂದ ಎದ್ದು ಗಿರಿಯ ಕೋಣೆಗೆ ಬಂದು ನೋಡಿದನು ಗಿರಿಜೆಗೆ ಇನ್ನೂ ಎಚ್ಚರವಾಗಿರಲಿಲ್ಲ. ತನ್ನ ಹಾಸಿಗೆಯ ಬಳಿಯಲ್ಲಿದ್ದ ಕುರ್ಚಿಯ ಮೇಲೆ ಕುಳಿತು ಆವುದನ್ನೋ ಓದಲು ತೊಡಗಿದನು.

ಹನ್ನೊಂದು ಘಂಟೆ ಹೊಡೆದ ಮೇಲೆ ಗಿರಿಜೆಗೆ ಎಚ್ಚರವಾಯಿತು. ಕಣ್ದೆರೆದು ಮೆಲ್ಲನೊಮ್ಮೆ ಅಕ್ಕನನ್ನು ಕರೆದಳು. ಅಕ್ಕನಿಂದ ಉತ್ತರವು ಬರಲಿಲ್ಲ

ಓದುತ್ತ ಕುಳಿತಿದ್ದ ಯೋಗಾನಂದನಿಗೆ ಇವಳು ಕೂಗಿದುದು ಕೇಳಿಸಲಿಲ್ಲ. ಗಿರಿಜೆಯು ತನ್ನ ಕೂಗಿಗೆ ಯಾರೂ ಉತ್ತರವೀಯದಿದ್ದುದರಿಂದ ಮುಸುಕು ತೆಗೆದು ತಲೆಯೆತ್ತಿ ನೋಡಿದಳು. ಚಕಿತೆಯಾದಳು. ಪತಿಯು ಅಲ್ಲಿಯೇ ಕುಳಿತು ಓದುತ್ತಲಿದ್ದರೂ ಉತ್ತರವನ್ನು ಕೊಡಲಿಲ್ಲವೇಕೆಂದು ವಿಚಾರಮಾಡುತ್ತ ಸ್ವಲ್ಪ ಘಟ್ಟಿಯಾಗಿ ಕೇಳಿದಳು, ' ಇನ್ನೂ ಮಲಗಿಲ್ಲವೇ '

ಪತ್ನಿಯ ಕಂಠಸ್ವರವನ್ನು ಕೇಳಿದೊಡನೆ ಯೋಗಾನಂದನು ತಿರುಗಿನೋಡಿ ಕೈಯಲ್ಲಿದ್ದ ಪುಸ್ತಕವನ್ನು ಕೆಳಗಿರಿಸಿ ಥಟ್ಟನೆದ್ದು ಮೇಜಿನ ಮೇಲಿರಿಸಿದ್ದ ಹಾಲಿನ ಪಾತ್ರೆಯನ್ನೂ ಔಷಧದ ಕುಪ್ಪಿಯನ್ನೂ ಬಟ್ಟಲನ್ನೂ ತೆಗೆದುಕೊಂಡು ಗಿರಿಯ ಹಾಸಿಗೆಯ ಬಳಿಗೆ ಬಂದು ಬಾಗಿಲನ್ನು ಸ್ವಲ್ಪ ಓರೆಮಾಡಿ ಪತ್ನಿಯ ಹಾಸಿಗೆಯ ಮೇಲೆ ಕುಳಿತನು. ಪತಿಯು ಎದ್ದು ಬಂದುದನ್ನು ನೋಡಿ ಗಿರಿಜೆಯು ಮೆಲ್ಲನೆ ಎದ್ದು ಕುಳಿತು ಬೆವತು ಹೋಗಿದ್ದ ಮೈಯನ್ನು ಕೈವಸ್ತ್ರದಿಂದ ಚನ್ನಾಗಿ ಒರಸಿಕೊಂಡಳು.

ಯೋಗಾ—(ಹಾಲಿನ ಪಾತ್ರೆಯನ್ನು ಮಂಚದ ಮೇಲಿರಿಸಿ ಪತ್ನಿಯ ಮೈಯನ್ನು ಸವರುತ್ತ) ಗಿರಿ, ಜ್ವರ ಆರಿದೆ. ತಲೆಶೂಲೆ ಇಲ್ಲವಷ್ಟೆ ?

ಗಿರಿ—ತಲೆಶೂಲೆಯುಂಟೋ ಇಲ್ಲವೋ ಎನ್ನುವಂತಿದೆ. ನೀವಿನ್ನೂ ಮಲಗಿಲ್ಲವೇಕೆ ?

ಯೋಗಾ—ನಿನಗೆ ಔಷಧ ಹಾಲು ಕುಡಿಸಿ ಮಲಗುತ್ತೇನೆ !

ಗಿರಿ—ಮತ್ತಾವ ಔಷಧ ? ನಾನು ಸಾಯಂಕಾಲವೇ ತೆಗೆದುಕೊಂಡಿದ್ದೆ.

ಯೋಗಾ—ಅದಲ್ಲ; ನಾನು ತಂದಿರುವ ಔಷಧವನ್ನು ಕೊಡುತ್ತೇನೆ?

ಗಿರಿ—ಈಗಲೇ ಯಾಕೆ ? ನಾಳೆಯಾದರೆ ಆಗದೇ ?

ಯೋಗಾ—ಇಂದು ದಿನ ಶುದ್ಧಿಯಿದೆಯಾದುದರಿಂದ ಈಗಲೇ ಪ್ರಾರಂಭ ಮಾಡುತ್ತೇನೆ. (ಎಂದು ಹೇಳಿ ಸ್ವಲ್ಪ ಹಾಲಿಗೆ ಔಷಧಿಯನ್ನು ಸೇರಿಸಿ ಕೊಟ್ಟನು)

ಗಿರಿ—(ಕೈಯಲ್ಲಿ ಹಿಡಿದು) ಇದೆಲ್ಲಾ ಯಾತಕ್ಕೆ ?

ಯೋಗಾ—(ಮುಗುಳು ನಗೆಯಿಂದ) ಯಾಕೆಂದರೆ ಏನೆನ್ನಬೇಕು ? ಗಿರಿ, ಔಷಧವನ್ನು ಕೊಡುವುದು ಯಾಕೆ, ನೀನೇ ಹೇಳು. ಎಳಗೂಸೇನೂ ಅಲ್ಲವಷ್ಟೆ!

ಗಿರಿ—ಎಳಗೂಸಲ್ಲದಿದ್ದುದರಿಂದಲೇ ಹೇಳಿದೆ. ಇನ್ನು ಮೇಲೆ ನನಗೆ ಔಷಧದಿಂದಾಗುವದೇನು ? ನನಗಿನ್ನೇನೇನೂ ಬೇಡ.

ಯೋಗಾ—ಮುಖವನ್ನು ತಿರಿಗಿಸಿ ಮೆಲ್ಲನೆ ಗಿರಿ, ‹ಇನ್ನು ಮೇಲೆ’ ಎಂದರೆ ನಿನಗೀಗ ವಯಸ್ಸು ಮುಗಿದು ಹೋಯಿತೋ ಹೇಗೆ? ಹೀಗೇಕೆ ಬುದ್ಧಿಗೇಡಿ ಹುಡುಗರಂತೆ ಮಾಡುವೆ ! ತೆಗೆದುಕೋ !

ಗಿರಿ—ನನಗೆ ಸಾಕು, ಇನ್ನು ಔಷಧೋಪಚಾರಗಳೇನೂ ಬೇಕಿಲ್ಲ. ಈ ಒಣ ಉಪಚಾರದ ಮಾತುಗಳೂ ಬೇಡ, ಹೋಗಿ ಸ್ವಲ್ಪ ಮಲಗಿಕೊಳ್ಳಬಹುದು.

ಯೋಗಾ—(ನಗುತ್ತ ಪತ್ನಿಯ ಬೆನ್ನಮೇಲೆ ಕೈಯಾಡಿಸಿ) ಗಿರಿ, ನಿನ್ನ ಸಿಟ್ಟು ಶಿಖರವನ್ನು ಮುಟ್ಟಿರುವದೆಂದು ನಾನು ಒಲ್ಲೆ. ಇರಲಿ ನಾನು ಅಪರಾಧಿಯೇನೋ ಅಹುದು. ಆದರೂ ನಿನಗೆ ಅಪ್ಪಣೆ ಮಾಡುವ ಅಧಿಕಾರವೇನೋ ನನಗಿಧೆ. ನಿರ್ಬಂಧದಿಂದಾದರೂ ಔಷಧವನ್ನು ಕುಡಿಸಬಲ್ಲೆ. ಹಟಹಿಡಿಯ್ಯ ಬೇಡ, ಸುಮ್ಮನೆ ಕುಡಿ. (ಪತ್ನಿಯ ಮುಖವನ್ನು ತನ್ನ ಕಡೆಗೆ ತಿರುಗಿಸಿದನು)

ಗಿರಿ -(ಒಮ್ಮೆ ಪತಿಯ ಮುಖನ್ನು ನೋಡಿ ಮಾತಿಲ್ಲದೆ ತಲೆ ತಗ್ಗಿಸಿದಳು)

ಯೋಗಾ—(ಗಿರಿಯ ಗಲ್ಲವನ್ನು ಹಿಡಿಗೆತ್ತಿ ನೋಡಿ) ಗಿರಿ, ಮಾತಾಡಲೊಲ್ಲೆ ಯಾಕೆ? ಕಣ್ಣಿನಲ್ಲಿ ನೀರು ತುಂಬರುವದಲ್ಲಾ, ಹೀಗೇಕೆ ?

ಗಿರಿಯ ಕಣ್ಣುಗಳಲ್ಲಿ ನಿಜವಾಗಿಯೂ ನೀರು ತುಂಬಿದ್ದಿತು. ಪತಿಯ ಪ್ರಶ್ನೆಯಿಂದ ಹಿಂದಿನ ವಿಚಾರವೆಲ್ಲಾ ನೆನಪಾಗಿ ಕಣ್ಣುಗಳಿಂದ ನೀರು ಸಂತತಧಾರೆಯಾಗಿ ಸುರಿದು ಹೋಯಿತು. ಗಿರಿಯು ತಡೆಯಲಾರದೆ ಬಿಕ್ಕಿ ಬಿಕ್ಕಿ ಅತ್ತು ಬಿಟ್ಟಳು.

ಗಿರಿಯ ಈ ಅವಸ್ಥೆಯನ್ನು ನೋಡಿ ಯೋಗಾನಂದನಿಗೂ ಸಂತಾಪವಾಯಿತು. ಅವನ ಕಣ್ಣುಗಳಲ್ಲಿಯೂ ನೀರು ತುಂಬಿತು. ಆದರೂ ಧೈರ್ಯಹೊಂದಿ, ಪತ್ನಿಯ ಕೊರಳನ್ನಪ್ಪಿ ಕಣ್ಣೀರನ್ನು ತನ್ನ ಧೋತ್ರದಿಂದ ಒರಸಿ, ಕರುಣಾವ್ಯಂಜಕ ಸ್ವರದಿಂದ ಹೇಳಿದನು. ‹ಗಿರಿ, ಸಮಾಧಾನವನ್ನು ತಂದುಕೊ, ಅತಿರೇಕಕ್ಕೆ ಬಿಡಬೇಡ. ನೀನು ತಿಳಿದವಳಿರುತ್ತೀ, ನಿನಗೆ ಹೆಚ್ಚಿಗೆ ನಾನೇನೂ ಹೇಳಬೇಕಾಗಿಲ್ಲ. ನಿನಗಾಗಿ ಅಲ್ಲದಿದ್ದರೂ ನನಗಾಗಿ ನೀನಿನ್ನು ಸ್ವಸ್ಥಳಾಗು. ಗಿರಿ, ನನ್ನ ಅಪರಾಧಕ್ಕೆ ನಿನ್ನಲ್ಲಿ ಕ್ಷಮೆ-’

ಗಿರಿ—(ಅಷ್ಟಕ್ಕೇ ಪತಿಯ ಬಾಯಿಗೆ ಅಡ್ಡವಾಗಿ ತನ್ನ ಕೈಯಿರಿಸಿ) ಸಾಕು, ನಾನು ಅಳುವದಿಲ್ಲ, ಮುಂದೇನನ್ನೂ ಹೇಳಬೇಡಿ.

ಯೋಗಾ—ಹಾಗಾದರೆ ಸರಿ, ಇನ್ನು ಔಷಧವನ್ನು ಕುಡಿದು ಎರಡನೆಯ ಮಾತು.

ಗಿರಿ—ಮಾತಾಡುವದೆಲ್ಲಾ ಆಗಲಿ, ಆಮೇಲೆ-

ಯೋಗಾ—ನನ್ನ ಮಾತಿಗಿಷ್ಟು ಬೆಲೆಕೊಟ್ಟು, ಗಿರಿ, ಮೊದಲು ಔಷಧವನ್ನು ತೆಗೆದುಕೊಂಡು ಹಾಲು ಕುಡಿ ಆಮೇಲೆಸಾವಕಾಶವಾಗಿ ಮಾತನಾಡೋಣ, ಬೇಕಾದರೆ ಬೆಳತನಕ ಮಾತಾಡಬಹುದು.

ಗಿರಿ—ನಿದ್ದೆಗೆಟ್ಟರೆ ಮನೆಯಲ್ಲಿ ಯಾರಾದರೂ ಸಿಟ್ಟು ಮಾಡಿಯಾರು !

ಯೋಗಾ—(ನಗುತ್ತ) 'ಸಿಟ್ಟು ಮಾಡಿದರೆ ನಾನೇ ನೋಡಿಕೊಳ್ಳುತ್ತೇನೆ, ಇರಲಿ.' ಎಂದಿಷ್ಟು ಹೇಳಿ ಮುಂದೆ ಮಾತಾಡಗೊಡದೆ ಒತ್ತಾಯದಿಂದ ಔಷಧಿಯನ್ನು ತನ್ನ ಕೈಯಿಂದಲೇ ಕುಡಿಸಿಬಿಟ್ಟು ಆ ಬಳಿಕ ಹಾಲನ್ನು ಕೊಡಹೋದನು. ಗಿರಿಯು ಹಾಗೆ ಕುಡಿಯದೆ ಅರ್ಧ ಹಾಲನ್ನು ಪತಿಯು ಕುಡಿದ ಬಳಿಕ, ಉಳಿದುದನ್ನು ತಾನು ಕುಡಿದಳು. ಇಷ್ಟಕ್ಕೇ ಗಿರಿಜೆಗೆ ಆಯಾಸವಾದಂತಾಯಿತು. ಹಾಗೆಯೇ ಗೋಡೆಗೆ ಒತ್ತಿ ಕುಳಿತಳು.

ಯೋಗಾ—(ಗಿರಿಯ ಬೆನ್ನುಸವರುತ್ತ) ಗಿರಿ, ಇನ್ನು ನೀನು ಹಾಗೆಯೇ ಮಲಗು ನಾನು ಕುಳಿತು ಮಾತನಾಡುತ್ತೇನೆ.

ಗಿರಿ—ಇಲ್ಲ, ಇನ್ನೂ ಸ್ವಲ್ಪ ಹೊತ್ತು ಕುಳಿತಿರುತ್ತೇನೆ.

ಯೋಗಾ—'ಬೇಡ, ಶ್ರಮವಾದರೆ ಮತ್ತೆ ಜ್ವರಬಂದೀತು. ಮಲಗಿದಂತೆಯೇ ಮಾತನಾಡು.' (ಎಂದು ಬಲಾತ್ಕಾರದಿಂದ ಮಲಗಿಸಿದನು).

ಗಿರಿ—ನೀವೆಷ್ಟು ಹೊತ್ತು ಕುಳಿತಿರವೇಕು. ಹೋಗಿ ಸ್ವಸ್ಥ ಮಲಗಿದರೆ,-

ಯೋಗಾ—ಏನೂ ಚಿಂತೆಯಿಲ್ಲ. ನಾನು ಮಧ್ಯಾಹ್ನವೆಲ್ಲಾ ಮಲಗಿದ್ದೇನೆ ನಿನಗೂ ಒಂದು ನಿದ್ದೆಯಾಗಿದೆ?

ಗಿರಿ—ಅದಕ್ಕಲ್ಲ, ನಾನು ಹೇಳಿದ್ದು.

ಯೋಗಾ—ನೀನು ಮಲಗಿ ನಾನು ಕುಳಿತಿರುವದು ನಿನ್ನ ಮನಸ್ಸಿಗೆ ಸಮಾಧಾನವೆನ್ನಿಸದು ಅಲ್ಲವೆ ? ಗಿರಿ, ನನಗೆ ಸುಖವೇ ಏನಾ ಕಷ್ಟವೇನೂ ಕಾಣಬೊಲ್ಲದು. ಅದಿರಲಿ, ನಾನು ಮಧ್ಯಾಹ್ನವೆಲ್ಲಾ ನಿನ್ನ ಬಳಿಯಲ್ಲಿ ಕುಳಿತು ವಿರಾಮವಾಗಿ ಮಾತನಾಡಬೇಕೆಂದಿದ್ದೆ, ಏನೇನೋ ಅಡಚಣೆಗಳುಂಟಾದುವು. ಈಗ ಊಟವಾದೊಡನೆ ಬಂದು ನೋಡಿದೆ ನೀನು ಮಲಗಿ ನಿದ್ದೆ ಮಾಡುತ್ತಿದ್ದೆ.

ಗಿರಿ:—ಈದಿನ ಶ್ರಮವೂ ಕಡಿಮೆಯಾಗಿತ್ತು; ಮನಸ್ಸಿಗೂ ನೆಮ್ಮದಿಯಿತ್ತು; ಊಟವೂ ಸವಿಹತ್ತಿತು; ಹೊಟ್ಟೆಭಾರವಾಗಿ ಶ್ರಮವಾಯ್ತು; ಕುಳಿತಿರಲಾರದೆ ಹಾಗೆಯೇ ಬಂದು ಮಲಗಿದೆನು. 8-10 ದಿನಗಳಿಂದ ನಿದ್ದೆಯಿಲ್ಲದಿದ್ದುದರಿಂದ ಮಲಗಿದ್ದೊಂದೇ ತಡೆ, ಮೈಮರೆತು ನಿದ್ದೆ ಒಂದುಬಿಟ್ಟಿತು. ಎಚ್ಚರವಾಗಿ ನೋಡಿದಾಗ ಮನೆಯೆಲ್ಲಾ ನಿಶ್ಶಬ್ದವಾಗಿ, ನೀವು ಮಾತ್ರ ಜಾಗರವಾಗಿ ಕುಳಿತಿದ್ದಿರಿ!

ಯೋಗಾ:—ನಿನ್ನಲ್ಲಿ ಕೆಲವು ಮಾತುಗಳನ್ನು ಹೇಳಿ ಕೇಳುವದಿದ್ದುದರಿಂದ ಹಾಗೆಯೇ ಮಲಗುವದಕ್ಕೆ ಮನಸ್ಸಮಾಧಾನವಾಗಲಿಲ್ಲ. ನಿನ್ನ ಗಂಗಕ್ಕನೂ ಶೀನಪ್ಪನೂ ಹೇಳಿಹೋದರೂ ನಿನಗೆ ಎಚ್ಚರವಾಗಲೆಂದು ಕುಳಿತಿದ್ದೆ. ಅದೆಲ್ಲಾ ಸರಿ; (ನಸುನಗುತ್ತ) ಗಿರಿ, ನಿನ್ನ ರಾಧಾಶ್ಯಾಮನು ಈಗೆಲ್ಲಿ ಕುಳಿತಿರುವನು—ನನಗಿಷ್ಟು ಹೇಳಲಾರೆಯಾ ?

ಗಿರಿ:—(ಲಜ್ಜಿತೆಯಾಗಿ) ಯಾವಮಾತು-ಹೇಳಿ ಕೇಳಬೇಕೆಂದುದು ?

ಯೋಗಾ:—(ನಗುತ್ತ) ಮೊದಲು ನನ್ನ ಮಾತಿಗಿಷ್ಟು ಉತ್ತರವನ್ನುಹೇಳು! ಎಲ್ಲಿ, ಆ ನಿನ್ನ ರಾಧಾಶ್ಯಾಮನು? ನಾನೂ ನೋಡಬೇಕಲ್ಲ, ತೋರಿಸುತ್ತೀಯಾ?

ಗಿರಿ:—ನಿಮಗಾರೋ ಇಲ್ಲದ್ದೊಂದು ಸುದ್ದಿಯನ್ನೇ ಹೇಳಿದ್ದಾರೆ.

ಯೋಗಾ:—ಇಲ್ಲದ ಸುದ್ದಿಯಲ್ಲ, ನಲ್ಲೆಯಚಲ್ಲಾಟದ ಸುದ್ದಿಯನ್ನೆಲ್ಲಾ ನಾನು ಕೇಳಬಲ್ಲೆನು. ಮುಚ್ಚಿಡುತ್ತೀಯಾಕೆ ? ಗಿರಿ, ನಿನ್ನ ಶಾಮನು ಎಲ್ಲಿರುವನು? ನಿನಗೆ ಏನೆಂದನು ? ನನಗೇನೆಂದನು ?

ಗಿರಿ:—(ನಸುನಗುತ್ತ-ಪತಿಯ ಮುಖವನ್ನೇ ನೋಡುತ್ತ) ನನ್ನಶ್ಯಾಮನೂ ಮನೋಭಿರಾಮನೂ ಎಲ್ಲರೂ ಇಲ್ಲೇ ಇರುತ್ತಾರೆ. ಶಾಮನನ್ನು ಬೇಕಾದರೆ ನೀವೇ ಕೇಳಿ ನೋಡಿಕೊಳ್ಳಬಹುದು.

ಯೋಗಾ:—(ನಗುತ್ತ) ನನಗಾತನು ಕಾಣಲೊಲ್ಲನು. ಹೋಗಲಿ, ಬಿಡು, ಗಿರಿ, ನಿನಗೀ ಹುಚ್ಚನ್ನು ಹಿಡಿಸಿದವರಾರು? ಅದನ್ನಾದರೂ ಹೇಳುತ್ತೀಯಾ?

ಗಿರಿ:—(ಮುಖವನ್ನು ಸೊಟ್ಟುಮಾಡಿಕೊಂಡು) ಮತ್ತಾರಾದರೂ ಬರುತ್ತಾರೇನು ? ಎಲ್ಲಕ್ಕೂ ಕಾರಣಭೂತರು ಇದಿರಿಗೇ ಇದ್ದಾರೆ! ಕೆಲಸಕ್ಕೆ ಬಾರದ ಈ ಮಾತುಗಳೆಲ್ಲಾ ಏತಕ್ಕೋ!

ಯೋಗಾ:—ಇದಿರಿಗೆ ಕುಳಿತಿರುವವರೇ ಕಾರಣ! ನಿನಗೀ ಅತಿರೇಕದ ವೈರಾಗ್ಯವನ್ನೂ ಈ ಪ್ರಾಯೋಪವೇಶದ ಮಹಾವ್ರತವನ್ನೂ ನಾನೇ ಹೇಳಿಕೊಟ್ಟೆನೇನು ?

ಗಿರಿ:—ಹೇಳಿಕೊಡದಿದ್ದರೆ ನೋಡುವಂತೆ ಆಚರಿಸದಿರಿ! ಜೀವನದಲ್ಲಿ ಬೇಸರವಾದರೆ ಪ್ರಾಯೋಪವೇಶವನ್ನಾದರೂ ಮಾಡಿಕೊಳ್ಳುತ್ತಾರೆ; ಪ್ರಾಣವನ್ನಾದರೂ ಬಿಟ್ಟುಕೊಡುತ್ತಾರೆ.

ಯೋಗಾ:—ಜೀವನದಲ್ಲಿ ಅಷ್ಟೊಂದು ಬೇಸರಕ್ಕೆ ಕಾರಣ?

ಗಿರಿ:—(ಹುಬ್ಬುಗಂಟಿಕ್ಕಿ) ತಿರುತಿರುಗಿ ಕಾರಣ- ಗೀರಣ - ಹೇಳಬೇಕು! ಮೂರುವರ್ಷಗಳಿಂದ ಈದಯೆ, ಈಮಾಯೆ ಇದೆಲ್ಲಾ ಎಲ್ಲಿತ್ತೋ!-ಈಗ ಇದನ್ನು ಬೇಕೆಂದವರಾರೋ!!

ಯೋಗಾ:—(ಗಿರಿಯ ಎರಡು ಕೈಗಳನ್ನೂ ಜೋಡಿಸಿ ಹಿಡಿದುಕೊಂಡು, ಅವಳ ಮುಖವನ್ನೇ ದೃಷ್ಟಿಸಿ ನೋಡುತ್ತ) ಗಿರಿ, ಒಂದೇ ತಡವೆಗೆ ನಿರಾಕರಿಸಬೇಡ; ಮೂರುವರ್ಷಗಳಿಂದಲೂ ನನ್ನ ದೇಹವು ಅಲ್ಲಿದ್ದರೂ ನನ್ನ ಜೀವವು-ಹೃದಯವು, ನನ್ನ ಗಿರಿಯಲ್ಲಿತ್ತು; ಗಿರಿಯು ನನ್ನ ಹೃದಯವನ್ನು ಬಿಟ್ಟು ಒಂದು ವಿಘಳಿಗೆಯಾದರೂ ಮರೆಯಾಗಿಲ್ಲ! ದೇವರಪೂಜೆ-ಧ್ಯಾನ-ಆಹ್ನಿಕ-ಯಾವದೇ ಸಮಯದಲ್ಲಾದರೂ ಗಿರಿಯು ನನ್ನ ದೃಷ್ಟಿಪಥದಲ್ಲಿಯೇ ನಿಂದಿರುತ್ತಿದ್ದಳು. ಪರಿಸ್ಥಿತಿಯು ಪ್ರತಿಕೂಲವಿದ್ದುದರಿಂದ ನಮ್ಮಿಬ್ಬರಿಗೂ ಇಷ್ಟು ದೀರ್ಘಕಾಲದ ವಿರಹವೊದಗಿತ್ತು! ಇದೆಲ್ಲಕ್ಕೂ ದೈವವಿಲಾಸವೇ ಮೂಲವೆಂದು ಸೂಜ್ಞಳಾದ ನೀನು ತಿಳಿದೂ ಅಜ್ಞಸ್ತ್ರೀಯಂತೆ ನನ್ನನ್ನು ನಿಷ್ಠುರಪಡಿಸುವದೂ ಜೀವಿತದಲ್ಲಿ ನಿರಾಶೆಗೊಳ್ಳುವದೂ ನಿನಗೆ ತಕ್ಕುದಲ್ಲ. ಇನ್ನು ಮುಂದೆ ಹೀಗೇನೂ ಆಗುವದಿಲ್ಲ.

ಗಿರಿ:—(ವಿಕೃತಸ್ವರದಿಂದ) ಮುಂದಿನ ಮಾತನ್ನು ತೆಗೆದುಕೊಂಡು ನನಗಿನ್ನೇನಾಗಬೇಕು! ನಿರುಪಯೋಗೀ ಜೀವನವು ಹೇಗಾದರೂ ಪಾರುಗಾಣಲೆಂದು ನಿರೂಪವನ್ನಿಷ್ಟು ಕೊಟ್ಟು ಬಿಟ್ಟರಾಯಿತು!

ಯೋಗಾ—(ಖಿನ್ನನಾಗಿ) ಮತ್ತೆಮತ್ತೆಯೂ ಹೀಗೆ ಹಟಹಿಡಿಯುತ್ತೀಯೇಕೆ! ಗಿರಿ, ನೀನು ನಿರುಪಯೋಗಿಯೇನು? ಯಾರಿಗೆ? ಹೇಗೆ? ಯಾತಕ್ಕೆ?

ಗಿರಿ:—ಯಾರಿಗೆ-ಕೈಹಿಡಿದವರಿಗೆ! ಹೇಗೆ ಯೋಗ್ಯತೆಯಾಗಲೀ ಸಾಮರ್ಥ್ಯವಾಗಲೀ ಇಲ್ಲದ್ದರಿಂದ; ಯಾವದೇ ಕೆಲಸಕ್ಕೂ ಒದಗದವಳಾಗಿರುವುದರಿಂದ.

ಯೋಗಾ:—ನೀನೇ ನಿರುಪಯೋಗಿಯೆಂದೂ ಸಮಯಕ್ಕೆ, ಸಹಾಯಕ್ಕೆ ಒದಗದವಳೆಂದೂ ಹೇಳುವುದಾದರೆ, ನಿಜವಾದ ಸಹಾಯಕರು ಮತ್ತಾರು? ಇಲ್ಲದೊಂದು ಕೊರತೆಯೊಡ್ಡಿ ಹೀಗೇಕೆ ಸೊರಗುತ್ತೀ?

ಗಿರಿ:—(ಪತಿಯ ಕೈಗಳನ್ನು ಹಿಡಿದುಕೊಂಡು) ಪ್ರಭು! ಈಗ ನನಗೆ ಕೊರತೆಯಿಲ್ಲ, ನನ್ನ ಮನಸ್ಸು ಪೂರ್ಣಶಾಂತವೂ ಸುಸ್ಥಿರವೂ ಆಗಿದೆ. ಈಗ ನನಗಾವ ಆಶೆಯೂ ಇಲ್ಲ.

ಯೋಗಾ:—ಯಾವುದೂ ಇಲ್ಲವೆ, ಗಿರಿ, ಹೇಳು-ಯಾವ ಆಶೆಯೂ ಇಲ್ಲವೇ-ಎಲ್ಲಾ ಆಶೆಗಳನ್ನೂ ಬಿಟ್ಟುಕೊಟ್ಟಿರುವೆಯಾ ?

ಗಿರಿ:—ಎಲ್ಲವನ್ನೂ ಬಿಡುವುದು ಈಗಲ್ಲ; ಪ್ರಭು, ನನಗೀಗ ಈ ಶರೀರ ಸಂಬಂಧವಾದ ಆಶೆಯೊಂದೂ ಇಲ್ಲವೆಂದು ಮಾತ್ರ ಹೇಳಿದೆ. ಬೇರೆಬೇರೆ ಅರ್ಥ ಮಾಡಿಕೊಳ್ಳುವಿರೇಕೆ ? ತಮ್ಮ ಸೇವೆಯ ವಿಷಯವಾದ ಚಿಂತೆಯಿಲ್ಲ; ಏಕೆಂದರೆ ಪೂರ್ಣಹಕ್ಕುದಾರರು ನಿಮ್ಮ ಬಳಿಯಲ್ಲಿರುವುದರಿಂದ ಮತ್ತಾವ ಕೊರತೆಯೂ ಇರಲಾರದೆಂಬ ಭರವಸೆಯು ನನಗಿದ್ದು ಸಮಾಧಾನವುಂಟಾಗಿದೆ ಇನ್ನು ನನಗಿರುವ ಆಶೆಯೆಂದರೆ,—

ಯೋಗಾ:—(ವಿಕೃತಸ್ವರದಿಂದ) ರಾಧಾಶ್ಯಾಮನಲ್ಲಿ ಸೇರಿಹೋಗಬೇಕೆಂಬ ಆಶೆ, ಅಪರಾಧಿಯೆಂದು ಪತಿಯನ್ನು ವಂಚಿಸಿ ವಿಶ್ವಾಸಘಾತಮಾಡಿ ಹೋಗಬೇಕೆಂಬ ಆಶೆ!-ಅಲ್ಲವೇ ಗಿರಿ ?

ಗಿರಿ:—(ಅಪ್ರತಿಭಳಾಗಿ) ಅದರಲ್ಲಿ ವಿಶ್ವಾಸಘಾತವಾಗಲೀ ವಂಚನೆಯಾಗಲೀ ಎಲ್ಲಿಯದು ? ಯಾರಿಗೂ ಬೇಡವಾದುದನ್ನು ಇಲ್ಲದಂತೆಯೇ ಮಾಡೆಂದು ಸರ್ವಕರ್ತನಲ್ಲಿ ಮರೆಹೊಗುವದೂ ದೋಷವೇ? ತಪ್ಪೇ ?

ಯೋಗಾ:—ಸಾಕುಮಾಡಿನ್ನು, ಗಿರಿ. ಇನ್ನು ಇದಕ್ಕೂ ಹೆಚ್ಚಾಗಿ ಮರ್ಮಸ್ಪೃಕ್ಕಾದ ಮಾತುಗಳನ್ನಾಡಬೇಡ. ನಾನೆಂದೂ ನಿನ್ನಲ್ಲಿ ಅವಿಶ್ವಾಸಿಯಾಗಿಲ್ಲ; ನಿನ್ನನ್ನು ವಂಚಿಸಿಲ್ಲ. ಈ ಜನ್ಮದಲ್ಲಿ ಮಾತ್ರವಲ್ಲ, ಮುಂದಿನ ಜನ್ಮಗಳಲ್ಲಿಯಾದರೂ ನೀನು ನನಗೆ ಬೇಡವೆಂದು ನೆನಸುವಂತಿಲ್ಲ. ಹಿಂದಿನ- ಈಗಿನ- ಮತ್ತು ಮುಂದಿನ ಎಲ್ಲಾ ಜನ್ಮಗಳಲ್ಲಿಯೂ ನೀನು ನನಗೆ ಸಹಾಯಕಳು ಯಾವಪಾಪ-ಶಾಪಗಳ ಫಲದಿಂದಲೇ ನಮಗೀ ವಿರಹಗಳೊದಗಿದ್ದರೂ ನಮ್ಮಿಬ್ಬರ ಹೃದಯವೂ ಒಂದಾಗಿದೆ; ನಮ್ಮೀ ಪ್ರೇಮವು ಶುದ್ಧದೈವಿಕವಾದುದು. ಅದಕ್ಕೆ ಹೇಗೂ ವಿಚ್ಛಿತ್ತಿಯಿಲ್ಲ. ಇದೇ ನನ್ನ ಹೃದಯದಲ್ಲಿರುವ ದೃಢಭಾವನೆ !

ಗಿರಿ, ನಿನಗಿನ್ನೂ ಸಂದೇಹವಿದ್ದರೆ ಹೇಳು, ಅದಕ್ಕೆ ಯಾವ ಪ್ರಮಾಣವನ್ನಾದರೂ ಮಾಡಬಲ್ಲೆನು. ಆದರೆ, ಮೂರು ವರ್ಷಗಳಿಂದ ನನ್ನನ್ನು ನೋಡಬರ

ಲಿಲ್ಲವೇಕೆಂದು ಕೇಳುವಿ! ಸುಮ್ಮನೇ ಬಂದುಹೋಗಿ-ಉಪಯೋಗವೇನು? ನಿನ್ನನ್ನು ನನ್ನ ಸಮೀಪವರ್ತಿನಿಯಾಗಿ ಮಾಡಿಕೊಳ್ಳುವಂತಾಗುವ ಅನುಕೂಲತೆಯನ್ನು ಹೊಂದಿಯೇ ನಿನ್ನಲ್ಲಿಗೆ ಬರಬೇಕೆಂದು ಮಾಡಿದ್ದೆ; ಇಷ್ಟು ಹೊರತು ನಿನ್ನನ್ನು ಮರೆ ತಾಗಲೀ ತೊರೆದುಬಿಟ್ಟಾಗಲೀ ನಾನಲ್ಲಿ ಸುಖಲೋಲುಪನಾಗಿ ಮೆರೆಯುತ್ತಿದ್ದೆನೆಂದೆಣಿಸಬೇಡ ! ಆ ನಿನ್ನ ಅಕ್ಕನಲ್ಲಿ,—ಸಮೀಪವರ್ತಿನಿಯಾಗಿದ್ದು ಸಮಯಕ್ಕೆ ಬೇಕಾಗುವ ಗೃಹಕಾರ್ಯಗಳನ್ನು ಮಾಡಿಕೊಂಡು ಹೋಗುತ್ತಿರುವಳಲ್ಲಿ-ಕೂಡ, ನಾನು ಪರವಶನಾಗಿ ಸರಸವಾಡಿಲ್ಲ. ಹೆಚ್ಚೇಕೆ, ಗಿರಿ, ಈ ನಮ್ಮ ದೀರ್ಘವಿರಹಕಾಲದಲ್ಲಿ ನನ್ನ ನಿತ್ಯಚರ್ಯೆಯೂ ಮನೋವೃತ್ತಿಯೂ ಕೇವಲ ಉದಾಸೀನದಿಂದಲೂ ನಿರುತ್ಸಾಹದಿಂದಲೂ ನಡೆದಿರುವದೆಂದು ತಿಳಿ;—

ಗಿರಿಜೆಗೆ ಪತಿಯ ಈ ಭಾಷಣದಿಂದ ಏನೋ ಒಂದುವಿಧವಾದ ಯಾತನೆಯುಂಟಾದಂತೆಯಾಯಿತು. ತಡೆಯಲಾರದೆ ಎದ್ದು ಕುಳಿತು, ಪತಿಯ ತೊಡೆಯ ಮೇಲೆ ಮುಖವನ್ನಿರಿಸಿ ಆತನ ಕೈಗಳನ್ನು ಹಿಡಿದು ಕಣ್ಣಿಗೊತ್ತಿಕೊಂಡು ಗದ್ಗದ ಸ್ವರದಿಂದ ಹೇಳಿದಳು.—

ಪ್ರಭು ! ಅಜ್ಞಳ ಅಪರಾಧವೆಲ್ಲವನ್ನು ಕ್ಷಮಿಸಬೇಕು. ಆ ಕ್ರೋಶದಿಂದ ನಾನಾಡಿದುದನ್ನು ಮನಸ್ಸಿನಲ್ಲಿಡಬಾರದು. ಅದು ನನ್ನ ಮನಃಪೂರ್ವಕವಾಗಿ ಹೇಳಲ್ಪಟ್ಟುದಲ್ಲವೆಂದು—

ಯೋಗಾ:—(ಪತ್ನಿಯ ಭುಜಗಳನ್ನು ಹಿಡಿದೆಬ್ಬಿಸಿ ಅಪ್ಪಿಕೊಂಡು) ಗಿರಿ, ನಿನ್ನಲ್ಲಿ ಇಷ್ಟೂ ಅಪರಾಧವು ನನಗೆ ಕಾಣಲಿಲ್ಲ. ಅಪರಾಧವೆಲ್ಲಾ ನನ್ನದು! ಒಂದುವೇಳೆ ಸ್ತ್ರೀಸ್ವಭಾವಕ್ಕನುಸರಿಸಿ ಸಹನಾತೀತವಾದ ತಾಪದಿಂದ ನೀನ ನಿಷ್ಠುರವಾಡಿದರೂ ಅದು ನನಗೆ ಅಪರಾಧವಾಗಿ ತೋರುವದಿಲ್ಲ ! ಅದರಲ್ಲಿ ನಿನ್ನಹೃದಯದ ಪ್ರೇಮವೆಷ್ಟೆಂಬುದನ್ನೇ ಎತ್ತಿ ತೋರಿಸುತ್ತದೆ !

ಗಿರಿ:—(ಮಾತನಾಡಲರಿಯದೆ ಪತಿಯ ಭುಜದಮೇಲೆ ಮುಖವನ್ನಿರಿಸಿದಳು.)

ಯೋಗಾ:—(ಪತ್ನಿಯ ಬೆನ್ನಮೇಲೆ ಕೈಯಾಡಿಸುತ್ತ) ಹೇಳು, ಗಿರಿ, ಇನ್ನು ನೀನು ನನ್ನನ್ನು ವಂಚಿಸಲಿಕ್ಕಿಲ್ಲೆಂದು ಹೇಳು; ನನ್ನದಾಗಿ,-ಅನವರತವೂ ನನ್ನ ಚಿಂತನೆಗೊಳಪಟ್ಟುದಾಗಿರುವ-ಈ ವಸ್ತುವನ್ನು, ನೀನು, ನನ್ನನ್ನು ವಂಚಿಸಿ, ನಷ್ಟಪಡಿಸುವದಿಲ್ಲವೆಂದು ಭಾಷೆಯನ್ನು ಕೊಡು. ಇದರಿಂದ ನಾನಿನ್ನು ಮುಂದೆ

ಎಷ್ಟೋ ಕೆಲಸಗಳನ್ನು ನಿರ್ವಹಿಸಿಕೊಳ್ಳಬೇಕಾಗಿರುವದರಿಂದ ಇದನ್ನು ಪೂರ್ಣವಿಶ್ವಾಸದಿಂದ,—ಶ್ರದ್ಧೆಯಿಂದ ಜೋಕೆಮಾಡಿಕೊಂಡು ಬರುತ್ತೇನೆಂದು ಭರವಸೆಯನ್ನು ಕೊಡು. ಎಂದರೆ, ನನ್ನ ಮನಸ್ಸಿನ ತಾಪವು ಕಡಿಮೆಯಾಗುತ್ತದೆ. ಹೇಳು, ಗಿರಿ ?

ಗಿರಿ:—(ಸತೃಷ್ಣನಯನೆಯಾಗಿ ಪತಿಯನ್ನೇ ನೋಡುತ್ತ) ಪ್ರಭು! ನಾನದೆಲ್ಲವನ್ನೂ ಸಮ್ಮತಿಸಿರುವೆನು; ಪ್ರಮಾಣವನ್ನೂ ಮಾಡುವೆನು. ಆದರೆ ಒಂದು ವೇಳೆ ಮೀರಿದ್ದರೆ ನನ್ನ ವಾಗ್ದಾನದಿಂದೇನಾಗುವದು ?

ಯೋಗಾ:—ಮೀರಿಲ್ಲ; ನೀನು ನನ್ನ ಮಾತನ್ನು ನಡೆಯಿಸಿಕೊಡುವ, ಆ ನಿನ್ನ ರಾಧಾಶ್ಯಾಮನ ಅಪ್ಪಣೆಯನ್ನು ಪಾಲಿಸುವ ಸಂಕಲ್ಪಮಾಡಿದಿಯಾದರೆ, ಮುಂದೆ ಎಲ್ಲವೂ ಸಮಂಜಸವಾಗುವದು ! ನಿನ್ನ ಮನಸ್ಸು ಮಾತ್ರ ಇತ್ತಕಡೆಗೆ ಒಲಿಯಬೇಕು; ಅಂದರೆ ಉಳಿದ ಔಷಧೋಪಚಾರಗಳನ್ನು ನಾನೇ ನೋಡಿಕೊಳ್ಳುತ್ತೇನೆ.

ಗಿರಿ:—(ಕುತೂಹಲದಿಂದ)ಹಾಗಾದರೆ, ಇಲ್ಲಿ ಒಂದೆರಡು ದಿನಗಳಿರುತ್ತೀರಿ?

ಯೋಗಾ;—ಹೀಗೇಕೆ ಕೇಳುತ್ತೀ ? ಹುಚ್ಚೆದ್ದು ಹೊರಟುಬಂದವನು ಒಂದೆರಡೇ ದಿನಕ್ಕೆ ಬಿಟ್ಟು, ಅದರಲ್ಲಿಯೂ ಹಾಸಿಗೆ ಹತ್ತಿ ಮಲಗಿರುವ ನಿನ್ನನ್ನು ಹಾಗೆಯೇ ಉಪೇಕ್ಷಿಸಿ ಬಿಟ್ಟುಹೋಗುತ್ತೇನೆಂದು ಮಾಡಿದ್ದೀಯೇನು ? ಒಂದು ವಾರದವರೆಗಾದರೂ ಇಲ್ಲಿದ್ದು ನಿನ್ನ ಪ್ರಕೃತಿಯ ನ್ನು ಸುಧಾರಿಸಿದಮೇಲೆಯೇ ನಾನು ಹೊರಡುತ್ತೇನೆ. (ಪತ್ನಿಯ ಮೈಮೇಲೆ ಕೈಯಾಡಿಸಿದನು)

ಗಿರಿ:—ಪ್ರಕೃತಿಯನ್ನೇನು ಸುಧಾರಿಸುವದು ?

ಯೋಗಾ:—ಏನೆನ್ನಲಿ, ಗಿರಿ. ನೀನೇ ನೋಡಿಕೋ ! ನಿನ್ನ ಮೈ-ಕೈ ಕಾಲುಗಳು ಎಷ್ಟು ಕೃಶವಾಗಿವೆ ! ಮೋರೆ ನೋಡಿದರೆ ಇಷ್ಟಾದರೂ ರಸವಿಲ್ಲದೆ ಎಷ್ಟೊಂದು ಸೊರಗಿದ್ದೀಯೆಂದು ತಿಳಿಯುತ್ತದೆ,-ನೋಡು. ಬೇಕು ಬೇಕೆಂದೇ ನೀನು ಹೀಗೆ ದೇಹವನ್ನು ದಂಡಿಸಿದ್ದೀ. ಸಣ್ಣ ಹುಡುಗರಿಗಿರುವಷ್ಟು ಶಕ್ತಿಯಾದರೂ ನಿನಗಿಲ್ಲದಾಗಿದೆ ! ಔಷದವೇಗವನ್ನಾಗಲೀ ರೋಗದ ವೇಗವನ್ನಾಗಲೀ ತಡಕೊಳ್ಳುವಷ್ಟು ತ್ರಾಣ ನಿನಗಿಲ್ಲವೆಂದಮೇಲೆ, ತಿಳಿದು ಹೇಗೆ ಸುಮ್ಮನಿರಲಿ !

ಗಿರಿ:—ನಾನೇನು ಮಾಡಬೇಕದಕ್ಕೆ ?

ಯೋಗಾ:—(ಖಿನ್ನಮುದ್ರೆಯಿಂದ) ಗಿರಿ ! ನೀನೇನು ಮಾಡುತ್ತಿ (ಮತ್ತೆ!

ಸ್ತ್ರೀಸ್ವಭಾವಕ್ಕನುಸರಿಸಿ ನಿನಗೆ ತೋರಿದ್ದನ್ನೇ ಮಾಡಿದೆ. ಜೀವನವು ಬೇಡವಾ ದ್ದೆಂದು ಬಿಡುತ್ತಿದ್ದೆ. ನಿನಗಾಗಿ ಮತ್ತೊಬ್ಬರು ಹೇಗೆ ಪ್ರಾಣಬಿಡುತ್ತಿರುವರೆಂದೂ ತಿಳಿಯದವಳಾದೆ! ಜಗತ್ತಿನಲ್ಲಿ ನಿನಗೆ ಪ್ರಿಯರಾದವರಾರೂ ಇಲ್ಲವೆಂದೇ ತಿಳಿದೆ!

ಗಿರಿ:—(ಗಿರಿಗೆ ಹೇಗೋ ಆಯಿತು. ತನ್ನೆರಡು ತೋಳುಗಳನ್ನೂ ಪತಿಯ ಕೊರಳಿಗೆ ಸುತ್ತಿ) ಇಷ್ಟೊಂದು ಸಿಟ್ಟೇಕೆ? ನಾನೇನು ಮಾಡಿದೆನೆಂದು ಸಿಟ್ಟು?

ಯೋಗಾ:—ನಾನು ಸ್ವಾತಂತ್ರ್ಯವನ್ನು ಬಿಟ್ಟೆನೆಂದು, ನೀನು ನನ್ನಲ್ಲಿದ್ದ ಅಧಿಕಾರವನ್ನು ಕಸುಗೊಂಡು ಸ್ವತಂತ್ರಳಾದಿಯೆಂದು,—ಸಿಟ್ಟು!

ಗಿರಿ:—(ಗಾಬರಿಯಾಗಿ) ಹಾಗೆಂದರೆ?

ಯೋಗಾ:—ಹಾಗೆಂದರೆ, ಹಾಗೆಯೇ! ನನ್ನದಾದ ಒಡವೆಯನ್ನು ನನಗೆ ಹೇಳದೆ ಕೇಳದೆ ನೀನೇ ಹಾಳುಮಾಡುತ್ತಿದ್ದೆ! ಒಡವೆ ಕಳೆದುಹೋಗಿದ್ದರೆ ಒಡವೆಯವರ ಎದೆಯೊಡೆಯದೇನೆಂದು ಚಿಂತಿಸದವಳಾದೆ!

ಗಿರಿ:—(ಮೆಲ್ಲನೆನಗುತ್ತ) ಒಡೆಯರು ತಮ್ಮ ಒಡವೆಯನ್ನು ಒಪ್ಪಿಸಿಕೊಂಡಾಯಿತಲ್ಲ, ಇನ್ನೂ ಸಿಟ್ಟೇ?

ಯೋಗಾ:—(ಪತ್ನಿಯ ಮೋರೆಯನ್ನೆತ್ತಿ ನೋಡುತ್ತ) ನಾನಾಗಿಯೇ ವಹಿಸಿಕೊಂಡೆನೇ ಹೊರತು ನೀನು ಬೇರೆ ಕೊಡಲಿಲ್ಲವಷ್ಟೆ? ಅದಿರಲಿ, ನನ್ನ ಪತ್ರಕ್ಕೆ ಹಾಗೇಕೆ ಉತ್ತರವನ್ನು ಕೊಟ್ಟೆ? ಅದನ್ನಾದರೂ ಹೇಳು!

ಗಿರಿ:—ಹೇಳಲಿ? ನಿಜವನ್ನು ಹೇಳಲಿ? ಸುಳ್ಳೇ ನನ್ನಮೇಲೆ ಆಗ್ರಹಿಸಿರುವೆನೆಂದು ಆರೋಪಿಸಿದ್ದೇಕೆ? ನನ್ನ ಪತ್ರಗಳಿಗೊಂದಕ್ಕೂ ಉತ್ತರವನ್ನು ಕೊಡದೆ ಬೀಗನಿಗೆ ಮಾತ್ರ ಬರೆದಿರೇಕೆ?

ಯೋಗಾ:—ಅಷ್ಟಕ್ಕೇ ಹಾಗೆ ನಿಷ್ಠುರವಾದ ಉತ್ತರವೇನು?

ಗಿರಿ:—ಓಹೋಹೋ ತಾವು ಪರಮ ಕೃಪಾಳುಗಳಲ್ಲವೇ? ಸತಿಯರು ಪತಿಗತಪ್ರಾಣೆಯರೆಂದು,—ಸತಿಯರಿಗೆ ಪತಿಯ ಅಸನ್ನಿಧಾನವು ಘೋರತಾಪದಾಯಕವೆಂದು, ಪತಿಯ ಅವಕೃಪೆಗಿಂತಲೂ ಬೇರೆ ನರಕಯಾತನೆ ಇಲ್ಲೆಂದು, ಆ ದಯಾಳು ಹೃದಯಕ್ಕೇಕೆ ತಿಳಿಯಲಿಲ್ಲ? ತಿಂಗಳಲ್ಲ-ಎರಡುತಿಂಗಳಲ್ಲ-ಒಟ್ಟಿಗೆ ನಾಲ್ವತ್ತು ತಿಂಗಳು! ಮೂರೂವರೆವರ್ಷ!! ಹಣಿಕಿನೋಡಿದ್ದರೆ, ಆಣೆ! ಯಾವಾಗಲೂ ಆಯನಕ್ಕೊಮ್ಮೆ ನಾಲ್ಕುಸಾಲು ಗೀಚಿ ಒಂದು ಪತ್ರವನ್ನು ಹಾಕಿದರೆ ಕರ್ತವ್ಯವು ಮುಗಿಯಿತೆಂದಲ್ಲವೇ ತಿಳಿದದ್ದು!

ಯೋಗಾ:—(ನಗುತ್ತ) ಅಹುದು, ಬಿಡು, ನನ್ನ ಆ ತಪ್ಪಿಗೆ ಮುಯ್ಯಿ ತೀರಿಸಲಿಕ್ಕಾಗಿ ನೀನು ಹೀಗೆ ನಿಷ್ಠುರಾಚರಣೆ ಹಿಡಿದೆ ! ಸರಿ, ನನ್ನ ತಂತಿ ಬಂದ ಮೇಲಾದರೂ ನಿನಗೆ ಶಾಂತವಾಯಿತೋ ?

ಗಿರಿ:—ನಿಮ್ಮ ತಂತಿಯನ್ನು ನಾನು ನಿಜವೆಂದು ತಿಳಿಯಲಿಲ್ಲ ! ಆದರೆ, ನನಗೆ ಅಷ್ಟರಲ್ಲಿ ಒಂದುರೀತಿಯಿಂದ ಮನಸ್ಸಮಾಧಾನವಾಗಿ ಹೋಗಿತ್ತೆಂದೇ ಹೇಳಬಹುದು.

ಯೋಗಾ:— ಎಂದರೆ, ರಾಧಾಶ್ಯಾಮನ ಹಂಬಲುಮಾತ್ರ ಹತ್ತಿತ್ತು !

ಗಿರಿ:—(ನಾಚಿ) ನಿಮಗ್ಯಾರು ಹೇಳಿದರು ?

ಯೋಗಾ:—ಮಧ್ಯಾಹ್ನ ಶೀನಪ್ಪನು ಸಂಗ್ರಹವಾಗಿ ಹೇಳಿದ್ದರಮೇಲೆ ಗಂಗಕ್ಕನನ್ನೇ ಕೇಳಿ ಸಮಗ್ರವಾಗಿ ತಿಳಿದೆನು. ಗಿರಿ, ಈಗ ಹೇಳು. ರಾಧಾ ಶ್ಯಾಮನನ್ನು ಸೇರಲು ಯಾವಾಗಹೊರಡುತ್ತೀ !

ಗಿರಿ:—ಅವನು ಕರೆದಾಗ-ಮತ್ತು ಅವನು ಕರೆದಾಗ !

ಯೋಗಾ:—ನೀನಾಗಿ ಯೇಕೆ ಹೊರಡಬಾರದು !

ಗಿರಿ:—(ಹುಬ್ಬು ಗಂಟಿಕ್ಕಿ) ಸಾಕು, ನಿಮ್ಮ ಚೇಷ್ಟೆ ! ನಾನಾಗಿ ಹೋಗ ಬೇಕೆಂಬ ಹುಚ್ಚು ಆಗಲೇ-ಈ ಮೂರ್ತಿ ಇದಿರಿಗೆ ನಿಂತಾಗಲೇ ಬಿಟ್ಟುಹೋಯಿತು. ರಾಧಾಶ್ಯಾಮನೋ, ಮೇಘಶ್ಯಾಮನೋ-ಎಲ್ಲರೂ ಈಗ ಈ ರಾಮಮೂರ್ತಿಯ ಲ್ಲಿಯೇ ಕಾಣಿಸುತ್ತಿದ್ದಾರೆ.

ಯೋಗಾ:—ಭಲೆ ! ಇಷ್ಟು ನಿನ್ನ ಬಾಯಿಂದ ಬಂತಲ್ಲ, ಸಾಕು !

ಗಿರಿ:- ಬಾಯಿಂದ ಬರದೇನುಮಾಡೀತು! ತಂತಿ ಬಂದ ಒಂದುವಾರ ಹಗ ಲೂ ರಾತ್ರಿ ಗಾಡಿಯ ಹೊತ್ತು ನೋಡಿ ನೋಡಿ ತಲೆತಿರುಗಿಹೋಗಿತ್ತು. ನೂರೆಂ ಟುಚಿಂತೆಯಿಂದ ನಿದ್ದೆನೀರಡಿಕೆ ಸಹ ತೋರಲಿಲ್ಲವೆಂದಮೇಲೆಯೂ ಹೇಳಬೇಕೇನು?

ಯೋಗಾ:—ನಿದ್ದೆ ನೀರಡಿಕೆ ಬೇಡವಾಗಿತ್ತು? ಆದರೆ ರಾಧಾಶ್ಯಾಮನೋ?

ಗಿರಿ:—ಅವನು ಒಲಿದು ಕೈಹಿಡಿದೊಯ್ದಿದ್ದರಲ್ಲವೇ ? ಧರ್ಮವನ್ನೂ ಕರ್ತವ್ಯವನ್ನೂ ಹೇಳಿ ಮೈಮರೆಸಿಕೊಂಡವನನ್ನು ಕಾಣಲಿಲ್ಲ ? ನಡುನಡುವೆ ನೆನ ಪಾದಾಗ ನಿಂದಿಸಿಕೊಳ್ಳುತ್ತಿದ್ದೆ. ಹಾಸ್ಯಹಾಗಿರಲಿ, ಅಷ್ಟೇಕೆ ತಡವಾಯ್ತು ?

ಯೋಗಾ:—(ನಸುನಗುತ್ತ) ಹುಚ್ಚು ರೇಗಿದಂತಾಗಿ, ಕೂತು ಕೂತಂ ತೆಯೇ ತಂತಿಯೇನೋ ಬಿಟ್ಟೆ;-ಆದರೆ ಅಲ್ಲಿಂದ ಸವರಿಸಿಕೊಂಡು ಹೊರಟುಬರಲು ಇಷ್ಟು ತಡವಾಯ್ತು !

ಗಿರಿ:—ಶೀನಪ್ಪನಿಗೆ ಬರೆದಿದ್ದುದರಲ್ಲಿ ಈಗ ಬರುವದಾಗಿ ತಿಳಿಸಿರಲಿಲ್ಲ ?

ಯೋಗಾ:—ಇಲ್ಲಿ, ಬರುವ ಯೋಚನೆಯಿರಲಿಲ್ಲ. ಅನಂತನದಿನ ನನಗೆ ಏನೋ ಒಂದು ಬಗೆಯಾಗಿ ಮನಸ್ಸಿಗೆ ಚಿಂತೆಹುಟ್ಟಿ, ಆಗಲೇ ಇಲ್ಲಿಗೆ ಹೊರಟು ಬರಲು ಒಂಟಿಗಾಲಲ್ಲಿ ನಿಂತೆ. ಶಕ್ಯವಾಗದಿರಲು ಹುಚ್ಚನಂತಾಗಿದ್ದೆ ! ಹೆಚ್ಚೇಕೆ, ಗಿರಿ, ನಿನಗೇನೋ ಪ್ರಮಾದವಾಗಿದೆಯೆಂಬ ಶಂಕೆ ತಟ್ಟಿ, ಎಷ್ಟುಹೊತ್ತಿಗೆ ನಿನ್ನ ಬಳಿಗೆ ಬಂದೇನು;-ಯಾವಾಗ ನಿನ್ನನ್ನು ಸಂತೈಸುವೆನು, ಹೀಗೆ ಆತುರಹುಟ್ಟಿ ನನಗೆ 3-4 ದಿನ ಎಷ್ಟುಯಾತನೆಯುಂಟಾಯಿತೆಂದು ಬಲ್ಲೆ? ಹಾರಲಿಕ್ಕೆ ಬರುವಂತೆ ರೆಕ್ಕೆಗಳಿದ್ದರೆ ! ತಕ್ಷಣ ಇಲ್ಲಿರುತ್ತಿದ್ದೆ. ನನ್ನ ಸ್ಥಿತಿಹಾಗಿದ್ದು ನೀನು ಇಲ್ಲಿ ಈರೀತಿ ನಿಷ್ಠುರ ವ್ರತವನ್ನು ಹಿಡಿದು ಕುಳಿತಿದ್ದೆ !

(ಪತಿಯ ಮಾತುಗಳನ್ನು ಕೇಳಿ ಗಿರಿಜೆಯು ಬಹು ಪಶ್ಚಾತ್ತಾಪಪಟ್ಟಳು. ತನಗಾಗಿ ಪತಿಯು ಪಡುತ್ತಿರುವ ಕ್ಲೇಶಗಳನ್ನು ತಿಳಿದು ಅನುತಾಪಪಟ್ಟಳು. ಪತಿಯ ಪಾದಗಳನ್ನು ಒತ್ತುತ್ತ ಆತನ ಮುಖವನ್ನೇ ದೃಷ್ಟಿಸಿ ನೋಡುತ್ತ, ಮೆಲ್ಲ ಮೆಲ್ಲನೆ ಹೇಳಿದಳು—

ಆಂದದ್ದೆಲ್ಲಾ ಆಗಿಹೋಯಿತು. ಇನ್ನಾದರೂ ಸಮಾಧಾನದಿಂದಿರಲಿಕ್ಕಾಗದೇನು ? ನಿಮ್ಮ ದೇಹಾರೋಗ್ಯವೊಂದು ನೆಟ್ಟಗಿದ್ದು ನೀವು ಸುಖವಾಗಿದ್ದರೆ ಸಾಕು, ನನಗಿನ್ನೇನಾಗಬೇಕು ?

ಯೋಗಾ:—(ತನ್ನ ಪಾದಗಳನ್ನು ಹಿಸುಕುತ್ತಿದ್ದ ಪತ್ನಿಯ ಕರಗಳನ್ನು ಹಿಡಿದು, (ಮೆಲ್ಲನೆ ನಗುತ್ತ) ನನಗೆತಾನೇ ಆಗಬೇಕಾದುದೇನು, ಗಿರಿ ?

ಗಿರಿ.—(ತಡವರಿಸುತ್ತ)ಬೇರೆಬೇರೆಯಾಗಿ ಅರ್ಥಮಾಡದಿದ್ದರೆ ಹೇಳುತ್ತೇನೆ!

ಯೋಗಾ:—ಹೇಳಿಯಾದರೂ ಹೇಳು, ಅದೇನೆಂದು ಕೇಳುವೆ ?

ಗಿರಿ:—ನನ್ನದು ಒಣಗಿದ ಒಂದು ಕಟ್ಟೆ (ಕಟ್ಟಿಗೆ, ಕಾಷ್ಠ) ಹೋದರೆ ನಷ್ಟವೂ ಇಲ್ಲ. ಇದ್ದರೆ ಲಾಭವೂ ಇಲ್ಲ. ಹೋದರೆ ಮಕ್ಕಳು ಕಂಡವರ ಕೈಯಲ್ಲಿ ಬೀಳುವವೆಂಬ ಚಿಂತೆಯೂ ಇರುವದಿಲ್ಲ. ಕೈಹಿಡಿದವರಿಗೆಂದರೆ,—ಅವರಿಗೂ ಸಮಾಧಾನಕ್ಕೆ ಬೇಕಾದಷ್ಟು ಸಾಮಗ್ರಿಗಳಿವೆ ? ಏನೋ ಒಂದಿಷ್ಟು ತಾಪವಾದರೂ ನಾಲ್ಕಾರು ತಿಂಗಳಲ್ಲಿ ಮರೆತುಹೋಗಬಹುದು ! ಇನ್ನು ಹೆತ್ತವರಿಗೆ ! ಅವರಿಗಾದರೂ ಅದೇ ಮಾತು; ನಿಮ್ಮಮಾತೇ ಬೇರೆ. ನೀವು ಒಂದು ದೊಡ್ಡ ವೃಕ್ಷದಂತೆ ! ನಿಮ್ಮನ್ನೇ ಆಶ್ರಯಿಸಿಕೊಂಡು ಜೀವಿಸುತ್ತಿರುವವರು

ಎಷ್ಟೋ ಮಂದಿ! ನೀವು ನೆಟ್ಟಗಿದ್ದರೆ ನಿಮ್ಮನ್ನೇ ನಂಬಿರುವವರೆಲ್ಲರಿಗೂ ನೆಮ್ಮದಿಯಿರುವುದು. ಅಂತವರನ್ನು ನೋಡಿ ನಿಮಗೂ ನಲವುಂಟು. ಅದರಿಂದ ನಿಮ್ಮ ಆರೋಗ್ಯಕ್ಕೂ ಸುಖಕ್ಕೂ ಆಧಾರವಾಗಿರುವ, ನಿಮ್ಮ ಪತ್ನೀಪುತ್ರ ಭ್ರಾತೃಮಿತ್ರ ಭೃತ್ಯ ಬಂಧುವರ್ಗದ ಕ್ಷೇಮಲಾಭಕ್ಕೂ ನಾನು ದೇವದೇವನಲ್ಲಿ ಅನವರತವೂ ಬೇಡಿಕೊಳ್ಳುತ್ತಿರುವೆನು. (ತನ್ನ ಮಾತಿಗೆ ತುಟಿಗಳನ್ನು ಕೂಡ ಎರಡುಮಾಡದೆ ತನ್ನನ್ನೇ ನೋಡುತ್ತಲಿದ್ದ ಪತಿಯ ವಿಲಕ್ಷಣವಾದ ಮುಖಮುದ್ರೆಯನ್ನು ನೋಡಿ) 'ಯಾಕೆ, ಮಾತಿಲ್ಲದೆ ಹೀಗೆ ನೋಡುವದು?'

ಯೋಗಾ — (ಪಶ್ಚಾತ್ತಾಪವನಂತೆ ನಿಟ್ಟುಸಿರು ಬಿಟ್ಟು) ಏನೋ ನೆನಪಾಯಿತು. ಈಗ ನೀನು ಹೇಳಿದ ಮಾತುಗಳಿಂದ ಹಿಂದೆ ನಿನ್ನ ಅಕ್ಕನಿಗೆ ಬರೆದಿದ್ದ ಕಾಗದವು ನಿನ್ನ ಭಾವಯ್ಯನಕಡೆಯಿಂದ ನನ್ನಕಡೆಗೆ ಬಂದಿದ್ದು, ಅದನ್ನು ನಾನು ನೋಡಿದ್ದೆನಾಗಿ ಅದರಲ್ಲಿದ್ದ ಸಂಗತಿ ನೆನಪಾಗಿ ಹೇಗೋ ಆಯಿತು. ಅಷ್ಟೇ ನೀನೆಂದುದೆಲ್ಲಾ ಸಹಜವೇ! ಇರಲಿ, ಆದರೆ ಈಗದನ್ನು ಕಾರ್ಯತಃ ಮಾಡಿ ತೋರಿಸುವದು ಮಾತ್ರ ಬೇಡ, ಕಂಡೆಯಾ? ಗಿರಿ! ಇನ್ನೇನೂ ನಿನಗೆ ಹಿಂದಿನ ಕಷ್ಟವಿರಲಿಕ್ಕಿಲ್ಲ ಇದಕ್ಕೂ ಹೆಚ್ಚಾಗಿ ಹೇಳಲಾರೆ. ನನಗೀಗಲೇ ಹುಚ್ಚು ಹಿಡಿದಂತಾಗಿದೆ. ಇದ್ದುದರಲ್ಲಿ ಸಮಾಧಾನಗೊಂಡಿರ. ಹೊತ್ತು ಬಹಳವಾಯಿತು. ಯಾವ ಮಾತಿದ್ದರೂ ನಾಳೆಯಾಗಲಿ. ಮಲಗು. ಎಂದು ಪತ್ನಿಯ ಗಲ್ಲವನ್ನು ಹಿಡಿದು ಅಲುಗಿಸಿ, ಅವಳನ್ನು ಮಲಗಿಸಿ ಸಂತೈಸಿ, ಅವಳ ಅನುಮತಿಯನ್ನು ಪಡೆದು ತಾನೂ ಮಲಗಲಿಕ್ಕೆ ತನ್ನಹಾಸಿಗೆಯ ಒಳಗೆ ಹೋದನು.

---

## VII

ಯೋಗಾನಂದನು ಅಂದ ಮಾರನೆ ದಿನದಿಂದ ವಿಶೇಷವಾಗಿ ಪತ್ನಿಯ ಒಳಿಯಲ್ಲಿಯೇ ಕುಳಿತು ಮಾತುಕತೆಗಳನ್ನಾಡುತ್ತಲೂ ಓದುತ್ತಲೂ ಕಾಲಕಳೆಯುತ್ತಿದ್ದನು. ಔಷಧೋಪಚಾರಗಳೆಲ್ಲವೂ ಇತನ ಪರಾಮರ್ಶದಂತೆಯೇ ನಡೆಯುತ್ತಿದ್ದುವು. ಗಿರಿಗೆ ಈಗ ಹಟಕ್ಕಾಗಲೀ, ವೈರಾಗ್ಯಕ್ಕಾಗಲೀ ಉಪವಾಸ ಜಾಗರಣೆಗಾಗಲೀ ಅಪ್ಪಣೆಯಿಲ್ಲ, ಅವಕಾಶವಿಲ್ಲ. ಈಗಿನವರೆಗೆ ಮನಸ್ವಿಯಾಗಿದ್ದ ಗಿರಿಜೆ, ಈಗ ಹಸುಗೂಸಿನಂತೆ ನಯವಾಗಿಬಿಟ್ಟಳು. ಪಾಪ! ಇತ್ತಕಡೆ ಪತಿಯ

ಆಜ್ಞೆ, ಬಲಾತ್ಕಾರ, ಆದರ;- ಅತ್ತೆ "ಅಷ್ಟೊಂದು ಹಟಮಾರಿಯಾಗಿದ್ದವಳು ಈಗ ಹೇಗಾಗಿಬಿಟ್ಟೆ?" ಎಂದು ಮನೆಯವರೆಲ್ಲರ ಹಾಸ್ಯವಿನೋದಗಳು. ಏನು ಮಾಡಬಲ್ಲಳು? ಆದರೆ, ಅದೇನೂ ಕಷ್ಟವಾಗಿರದೆ ಸುಖಕರವಾಗಿಯೇ ತಿಳಿಯುತ್ತಿದ್ದಿತು.

ಗಿರಿಜೆಗೆ ಈಗ ರಾಧಾಶ್ಯಾಮನ ನೆನಪಾದರೂ ಆಗುತ್ತಿದ್ದಿತೋ ಇಲ್ಲವೋ ಹೇಳಲಾರೆವು. ಆದರೆ ಯೋಗಾನಂದ, ಶೀನಪ್ಪ, ಗಂಗಾಬಾಯಿ ಇವರ ನಾಲಿಗೆಗಳಲ್ಲಿ ಮಾತ್ರ ರಾಧಾಶ್ಯಾಮನ ನಾಮವು ನಲಿನಲಿದಾಡುತ್ತಿದ್ದಿತು.

ಗಂಗಾಬಾಯಿ ಹೊರಟಿದ್ದವಳು ಭಾವನು ಬಂದನೆಂದೂ ತಂಗಿ ಸುಧಾರಿಸುತ್ತಿರುವಳೆಂದೂ ಇನ್ನೂ ನಾಲ್ಕಾರು ದಿನಗಳಿದ್ದೇ ತಂಗಿಯ ಆರೋಗ್ಯವನ್ನು ನೋಡಿಕೊಂಡೇ ಹೋಗಬೇಕೆಂದೂ ನಿಂತುಬಿಟ್ಟಳು. ಗಿರಿಜೆಗೆ ಅಕ್ಕನು ಹೊರಡದೆ ನಿಂತುದೂ ಪತಿಯು ಬಳಿಯಲ್ಲೇ ಇರುವುದೂ ಅತ್ಯಂತ ಸುಖಸಂತೋಷದಾಯಕ ಸಂಗತಿಯಾಗಿದ್ದು, ಅವಳ ಮನಸ್ಸಿನಲ್ಲಿದ್ದ ಚಿಂತೆಯೆಲ್ಲಾ ದೂರವಾದುದರಿಂದ ಅವಳ ಪ್ರಕೃತಿಯೀಗ ಕ್ಷಣೇಕ್ಷಣೇ ಸುಧಾರಿಸುತ್ತಾ ಬರತ್ತಲಿದ್ದಿತು.

ಗಿರಿಜೆಯ ಆರೋಗ್ಯಾಭಿವೃದ್ಧಿಯನ್ನು ನೋಡಿ ಅವಳ ತಾಯ್ತಂದೆಯರಿಗೂ ಒಡಹುಟ್ಟಿದವರಿಗೂ ಸಂತೋಷವಾಯಿತು. ಪತ್ನಿಯು ಚೇತರಿಸಿಕೊಳ್ಳುತ್ತ ಬರುವದನ್ನೂ ಅವಳ ಉಲ್ಲಾಸವೃತ್ತಿಯನ್ನೂ ನೋಡಿ ಯೋಗಾನಂದನಿಗೆ ಕಳೆದುಕೊಂಡಿದ್ದ ನಿಧಿ ಕೈಸೇರಿದಂತಾಗಿ ಮತ್ತೊಂದು ಚಿಂತನೆಯನ್ನೂ ಮಾಡದೆ ಪತ್ನಿಯ ಆದರೋಪಚಾರಗಳಲ್ಲಿಯೇ ಇದ್ದುಬಿಟ್ಟನು.

ಯೋಗಾನಂದನು ಬಂದು ಇಂದಿಗೆ ಹತ್ತು ದಿನಗಳಾದುವು. ಗಿರಿಗೆ ಈಗ ಜ್ವರ ಪೂರ್ಣವಾಗಿ ನಿಂತಿದೆ. ಕೆಮ್ಮು ಕಡಿಮೆಯಾಗಿದೆ. ಬೆಳ್ಳಗಾಗಿಹೋಗಿದ್ದ ಮುಖದಲ್ಲಿ ಬಣ್ಣವೇರುತ್ತ ಬರುತ್ತಲಿದೆ. ನಿತ್ರಾಣದಿಂದ ತರತರ ನಡುಗುತ್ತಿದ್ದ ಕೈಕಾಲುಗಳು ಈಗಲೀಗ ಬಲಹೊಂದುತ್ತ ಬರುತ್ತಲಿವೆ. ಎದೆಯಲ್ಲಿ ತವಕವೂ ನಿಂತಿದೆ. ಮೊದಲಿನಂತೆ ಕಂಠಸ್ವರದಲ್ಲಿ ನಡುಕವಾಗಲೀ ತೊಡಕಾಗಲೀ ಇಲ್ಲ; (ಆದರೆ ಇನ್ನೂ ಅಷ್ಟು ಉತ್ತೇಜಕವಾಗಿಲ್ಲ.) ಸ್ವಲ್ಪ ಕುಳಿತರೂ ಬೆನ್ನು ಕೈಕಾಲುಗಳಲ್ಲಿ ಸೆಳತವುಂಟಾಗುತ್ತಿದ್ದುದು ಈಗ ಇಲ್ಲ. ತನ್ನ ನಿತ್ಯ ನೈಮಿತ್ತಿಕಗಳೆಷ್ಟೊ ಅಷ್ಟೇ ಅವಳು ಮಾಡುವ ಕೆಲಸಗಳು. ಅದಷ್ಟುಹೊರತು, ಬೇರೆಯಾವ ಸಣ್ಣಪುಟ್ಟ ಕೆಲಸಕ್ಕಾಗಲಿ, ಕಡೆಗೆ ತನಗೊಂದು ತಂಬಿಗೆ ನೀರನ್ನು ತರುವುದಕ್ಕೆ ಕೂಡ ಯೋಗಾನಂದನು ಅವಳನ್ನು ಬಿಡುತ್ತಿರಲಿಲ್ಲ.

ಗಿರಿಜೆಯು, ತನ್ನ ಪತಿಯು ಉದಾಸೀನನಾಗಿರುವನೆಂದೂ ತನ್ನಲ್ಲಿ ಆತನ ಬಲವಿಲ್ಲನೆಂದೂ ಕಲ್ಪಿಸಿಕೊಂಡು ತಾನು ಹಿಡಿದಿದ್ದ ನಿಷ್ಠುರ ವೃತ್ತಿಯನ್ನೂ ಅದರ ಫಲವಾಗಿ ತಾನಿಂದು ಅನುಭವಿಸುತ್ತಿರುವ ಶಾರೀರಕ ಕ್ಲೇಶವನ್ನೂ ತನ್ನೀ ಬಗೆಯ ನಿಷ್ಠುರತೆಗಾಗಿ ತನ್ನ ಮನೋವಲ್ಲಭನು ಪಡುತ್ತಿರುನ ಕಷ್ಟಗಳನ್ನೂ ಅಡಿಗಡಿಗೆ ನೆನೆನೆನೆದು ತನ್ನಲ್ಲಿ ತಾನೇ ಲಜ್ಜಿತೆಯಾಗಿ ತಿರಸ್ಕೃತೆಯಾಗಿ ತಿಳಿಯುವಳು. ತನ್ನಲ್ಲಿ ತನ್ನ ಪತಿಯ ಪ್ರೇಮವು ಎಷ್ಟು ಪರಕಾಷ್ಠತೆಯಲ್ಲಿರುವದೆಂದು ಹಿಗ್ಗುವಳು; ಇಂಥವನಲ್ಲಿ ತಾನಾಚರಿಸಿದ ಅಪರಾಧಕ್ಕಾಗಿ ಸಂತಪ್ತಮಾನಸಳಾಗಿ,ವಿನೀತೆಯಾಗಿ ಪತಿಯಲ್ಲಿ ಕ್ಷಮಾಯಾಚನೆಯನ್ನು ಮಾಡುವಳು. ಯೋಗಾನಂದನಲ್ಲಿ ಇವಳು ಕ್ಷಮಾಪ್ರಾರ್ಥನೆ ಮಾಡಬೇಕಾಗಿರಲಿಲ್ಲ. ಅದೆಲ್ಲವನ್ನೂ ಆತನು ಗುಣವನ್ನಾಗಿಯೇ ಸಂಗ್ರಹಿಸಿ ಇವಳನ್ನು ಮನ್ನಿಸಿದ್ದನು. ಮುಂದೆಯೂ ಇಂತಹ ನೂರಾರು ಸಹಸ್ರ ಅಪರಾಧಗಳನ್ನಾದರೂ ಕ್ಷಮಿಸುವುದಕ್ಕೆ ಸಿದ್ಧನಾಗಿರುವನು, ಎಂದ ಬಳಿಕ ಪತ್ನಿಯ ಕ್ಷಮಾಯಾಚನೆಯಿಂದ ಆತನ ಸಲವಿಮ್ಮಡಿಯಾಗುವುದರಲ್ಲಿ ಆಶ್ಚರ್ಯವೇನು ? ಪತ್ನಿಯು ಕ್ಷಮಾಯಾಚನೆಮಾಡಿದಾಗಲೆಲ್ಲಾ ಆತನು ನಗುತ್ತ ನಗುತ್ತ ನನ್ನಲ್ಲಿ ಕ್ಷಮಾಯಾಚನೆಮಾಡುವೆಯಾಕೆ? ರಾಧಾ ಶ್ಯಾಮನಲ್ಲಿ ನೀನು ಅಪರಾಧಿ, ಅವನಲ್ಲಿ ಬೇಡು. ಆದರೆ, ಮುನ್ನಿನಂತೆ ಮಾತ್ರ ಮನಸ್ವಿಯಾಗ ಬೇಡ ಕಂಡೆಯಾ? ಹಾಗಿದ್ದರೆ ಆತನಾದರೂ ಕ್ಷಮಿಸಿಯೇ ಕ್ಷಮಿಸುವನು

ಹೀಗೆ ಹೇಳಿ ಆಕೆ ಲಜ್ಜಿತೆಯಾಗುವಂತೆ ಮಾಡುವನು. ಅನುಕೂಲದಾಂಪತ್ಯವುಳ್ಳ, ಪತಿಪತ್ನಿಯರ - ದೈವಿಕಪ್ರೇಮ ಪ್ರತಿನಿವಿಷ್ಟರಾಗಿರುವ ಸತೀಪತಿಯರ ಪ್ರೇಮಾಲಾಪಗಳನ್ನಾಗಲೀ ನಾವು ವಿವರಿಸಬೇಕೆಂದರೆ ಅದಕ್ಕೆ ತುದಿ ಮೊದಲೊಂದೂ ಇಲ್ಲದಂತಾಗುವದು. ಆದರೂ, ಕರ್ತವ್ಯತತ್ಪರೆಯರೂ - ಪತಿಪರಾಯಣೆಯರೂ ಅಭಿಮಾನವತಿಯರೂ ಆದ ಸತಿಯರು - ಆರ್ಯ ನಾರೀಮಣಿಯರು ತಮ್ಮ ಪತಿಯ ಆಚರಣದಲ್ಲಿ ನಿಷ್ಕಾರಣವಾದ ಉದಾಸೀನತೆಯನ್ನು ಕಂಡರೆಂದರೆ ಎಂತಹ ದಾರುಣತಾಪವನ್ನು ಹೊಂದುವರೆಂಬುದನ್ನೂ, ಅದರಿಂದವರು ತಮ್ಮ ಪ್ರಾಣವನ್ನು ತೃಣೀಕರಿಸಿ ಹೇಗೆ ಆತ್ಮಯಜ್ಞಮಾಡಿಕೊಳ್ಳಲು ಸಿದ್ಧರಾಗಿ ನಿಷ್ಠುರ ವ್ರತವನ್ನು ಕೈಗೊಳ್ಳುವರೆಂಬುದನ್ನೂ ಉದಹರಿಸಿ ನಮ್ಮ ಪುರುಷ ಬಂಧುಗಳನ್ನು ಕುರಿತು - ನೆರೆನಂಬಿದ ನಿಮ್ಮರಸಿಯರನ್ನು ಹಾಗೆ ಕಡೆಗಣಿಸಿ ಕೊಲ್ಲುವಷ್ಟು ಕಟುಕತನವನು ಮಾತ್ರ ಕೈಕೊಳ್ಳಬಾರದೆಂದು ನಿವೇದಿಸಲಿಕ್ಕಾ

ಗಿಯೂ, ತಮ್ಮ ಪುರುಷರು ಅನಿವಾರ್ಯಕಾರಣಗಳಿಂದ ತಮ್ಮನ್ನು ವಿಚಾರಿಸಿಕೊಳ್ಳ ದಿದ್ದರೆ ಅದನ್ನೇ ಬೇರೆ ಬೇರೆ ಯಾಗಿ ಬಗೆದು ಅಕಾರಣವಾಗಲೀ - ಸಹಕಾರಣ ವಾಗಲೀ - ನಿಷ್ಠುರರಾಗಿ ಆತ್ಮಹತ್ಯೆ ಮಾಡಿಕೊಳ್ಳುವಂಥ ಹೀನಕೆಲಸವನ್ನು ಕೈಕೊಂಡು ಅದರಿಂದ ತನ್ನ ಇಹಪರಗಳನ್ನೂ ಕೆಡಿಸಿಕೊಂಡು ತಮ್ಮ ದುರ್ದೆಸೆ ಗಾಗಿ ತಮ್ಮ ಕೈಹಿಡಿದರಸರ ಅಂತಸ್ತಾಪಗಳಿಗೂ ಕಾರಣರಾಗಿ ದೌರ್ಜನ್ಯ ಭಾಜನೆಯರಾಗಿ ಸ್ತ್ರೀಸಮಾಜವನ್ನೇ ನಿಂದೆಗೊಳಗಾಗಿಸಬಾರದೆಂದೂ ಅಂತಹ ದುರ್ಭರಸಮಯದಲ್ಲಿಯೂ ನೀವು ಹೃದಯವನ್ನು ಬಲಪಡಿಸಿಕೊಂಡು ಪತಿಯ ಅನುಗ್ರಹಕ್ಕೆ ಸಂಕಲ್ಪಿಸಿ,ದೃಢಪ್ರಯತ್ನಮಾಡಿದರೆಂದರೆ ಪತಿಯು ಉದಾಸೀನನಾ ಗಿರಲಿ - ಹೇಗೆ ಇರಲಿ - ಆತನು ನಿಮ್ಮಲ್ಲಿ ಅನುಗ್ರಹಮಾಡಿಯೇ ಮಾಡುವನೆಂಬು ದನ್ನು ಗಟ್ಟಿಯಾಗಿ ನಂಬಿರಬೇಕೆಂದೂ ಪ್ರಾರ್ಥಿಸಿಕೊಳ್ಳಲಿಕ್ಕಾಗಿಯೂ ಇಷ್ಟು ಮಾತ್ರ ವಿವರಿಸಬೇಕಾಯಿತು.

---

## VIII

ಯೋಗಾನಂದನು ಶೀನಪ್ಪನ ಬರೆಯುವ ಕೋಣೆಯಲ್ಲಿ ಒಬ್ಬನೇ ಕುಳಿತು ಗಲ್ಲದ ಮೇಲೆ ಕೈಯಿರಿಸಿಕೊಂಡು ಅವುನೋ ವಿಚಾರದಲ್ಲಿ ಮಗ್ನನಾಗಿದ್ದನು. ಹು ಖವು ಗಂಟೆಕ್ಕಿದಂತೆ ಅಧೋವದನನಾಗಿ ಕುಳಿತಿದ್ದನು. ಹೊತ್ತು ಮಧ್ಯಾಹ್ನ ಮೂರು ಘಂಟೆಯಿರಬಹುದು ಶೀನಪ್ಪನೂ ಮನೆಯಲ್ಲಿರಲಿಲ್ಲವಾದುದರಿಂದ ಒಬ್ಬನೇ ಕುಳಿತು ವಿಚಾರದಲ್ಲಿದ್ದನು.

ಗಿರಿಜಾಬಾಯಿಯು ಪತಿಯಬಳಿಗೆ ಬಂದು ನೋಡಿದಳು. ಪತಿಯ ಈ ಬಗೆಯ ವ್ಯಸ್ತತೆಯನ್ನು ಕಂಡು ತಾನೂ ಅನುಕಂಪಿತಹೃದಯಳಾಗಿ ಥಟ್ಟನೆ ಮುಂದೆ ಬಂದು ಪತಿಯ ಬೆನ್ನಮೇಲೆ ಕೈಯಿರಿಸಿದಳು.

ಪತ್ನಿಯ ಮೃದುಶೀತಲಕರಸ್ಪರ್ಶನದಿಂದ ಯೋಗಾನಂದನು ಎಚ್ಚತ್ತು ತಲೆಯೆತ್ತಿನೋಡಿ, ಮುಖದಲ್ಲಿ ಗೆಲವನ್ನು ತಂದುಕೊಂಡು ಪತ್ನಿಯ ಕೈಹಿಡಿದು ಪಕ್ಕದ ಕುರ್ಚಿಯಲ್ಲಿ ಕುಳ್ಳಿರಿಸಿಕೊಂಡು ಕೇಳಿದನು.

ಯೋಗಾ :— ನೀನು ಬಂದೆಷ್ಟು ಹೊತ್ತಾಯಿತ್ತು, ಗಿರಿ ?

ಗಿರಿ :— ನಾನೂ ಇದೇ ಬಂದೆ. ಯಾವವಿಚಾರ ನಡೆದಿತ್ತು ?

ಯೋಗಾ :— (ಉಗುಳು ನುಂಗಿ) ಏನೂ ಇಲ್ಲ.

ಗಿರಿ :—ಊರಿಗೆ ಯಾವಾಗ ಹೊರಡಬೇಕು ?

ಯೋಗಾ:—ನಿನಗೆ ಹೇಳಿದವರಾರು ?

ಗಿರಿ:—ಅಪ್ಪನಿಂದಲೇ ತಿಳಿದೆನು. ಪನ್ನೋ ಬಂತಿ ಬಂದಿತೆಂದೂ ಊರಿಗೆ ಹೊರಡಬೇಕಾಗಿರುವದೆಂದೂ ಹೇಳಿದಂತೆ ತಿಳಿಸಿದರು.

ಯೋಗಾ :—( ಪತ್ರಿಯ ಮುಖವನ್ನೇ ನೋಡುತ್ತ ) ಏನು ಮಾಡಲಿ ಹೇಳು?

ಗಿರಿ :—ನನ್ನನ್ನೇನು ಕೇಳುವದು?

ಯೋಗಾ : ನಿನ್ನನ್ನು ಕೇಳದೆ ಇಲ್ಲಿ ಪ ತ್ತಾರನ್ನು ಕೇಳಲಿ?

ಗಿರಿ — ನಿಮ್ಮ ಅನುಕೂಲ ಅಭಿಪ್ರಾಯದಂತೆ ಮಾಡಬೇಕು. ಅದನ್ನು ಬಿಟ್ಟು ನನ್ನನ್ನು ಕೇಳಿದರೆ, ನಾನು ಹೇಳಿದಂತೆ ಮಾಡುವಿರೋ? ನಾನೊಂದು ವೇಳೆ—ಇಲ್ಲಿಯೇ ಇರಬೇಕೆಂದೂ ಹೋಗಬಾರದೆಂದೂ ಹೇಳಿದರೆ ಅದರಂತೆ ಮಾಡಬಹುದೋ?

ಯೋಗಾ :—ನಿನ್ನಲ್ಲಿ ಅಷ್ಟರ ಸ್ವಾರ್ಥಪರತೆಯಾಗಲೀ ತಿಳಿಗೇಡಿತನವಾಗಲೀ ಇದೆಯೆಂದು ತಿಳಿದಿಲ್ಲ. ಆ ವಿಷಯದಲ್ಲಿ ನನಗಿಷ್ಟು ಶಂಕೆಯಿದ್ದರೂ ಈ ಪ್ರಶ್ನೆ ಹೊರಡುತ್ತಿರಲಿಲ್ಲ. ಸಮಯ ನನ್ನ ನೋಡಿ ನೀನು ಮಾತಾಡುತ್ತೀಯೆಂದು ನನಗೆ ನಂಬಿಕೆಯುಂಟು. ಇದರ ಮೇಲೆ ಒಬ್ಬರು ಕರ್ತವ್ಯ ಸಮ್ಮೂಢರಾದರೆ ಮತ್ತೊಬ್ಬರು ಕಾಲೋಚಿತವಾಗಿ ಉಪದೇಶಿಸಿ ಜಾಗ್ರತಗೊಳಿಸಬೇಕಷ್ಟೆ?

ಗಿರಿ:— ನಾನು ಹೇಳುವದೇನು?(ನಸನಗುತ್ತ) ನನಗೇನೋ ನಿಮ್ಮನ್ನು ಕಳುಹಿಸಿಕೊಡಲಿಕ್ಕೆ ಇಷ್ಟವಿಲ್ಲ. ನಾನಂತೂ ಈಗ ನಿಮ್ಮನ್ನು ಬಿಟ್ಟು ಕೊಡುವಳೂ ಅಲ್ಲ.

ಯೋಗಾ:— (ಖಿನ್ನನಾಗಿ) ನೀನು ಹಾಗೆ ಹಟಹಿಡಿದರೆ ನಾನು ನಿಲ್ಲಲೇಬೇಕು.

ಗಿರಿ :—ನಾನು ಹಟಹಿಡಿದಮಾತ್ರಕ್ಕೇ ನೀವು ಮನೆ ಮಾರು, ಸ್ವಜನ, ಧನ, ಪರಿವಾರವೆಲ್ಲವನ್ನೂ ಬಿಟ್ಟು ಬಂದಿಲ್ಲೇ ನಿಲ್ಲುತ್ತೀರೇನು?

ಯೋಗಾ:— ಹಟಹಿಡಿದರೆ ಕೆಲಕಾಲದ ಮಟ್ಟಿಗಾದರೂ ನಿಲ್ಲಲೇಬೇಕು. ಆ ಮಾತು ಹೋಗಲಿ. ಸರಳವಾಗಿ ಮಾತಾಡು.

ಗಿರಿ :--(ಗಂಭೀರವಾಗಿ) ಊರುಬಿಟ್ಟು ಬಂದು 15 ದಿವಸಗಳಾದುವು.

ಎಷ್ಟುದಿನ ನಿಲ್ಲಬಹುದು? ಮನೆಯಲ್ಲಿ ಎಲ್ಲರೂ ಹಾದಿ ನೋಡುತ್ತಿರಬಹುದು. ನಾಳೆ ಹೊರಟುಬರುವದಾಗಿ ಈಗಲೇ ತಂತಿಯಿಂದ ಸಮಾಚಾರಕೊಟ್ಟು ನಾಳೆ ಹೊರಟರಾಯಿತು ಮನೆಯಲ್ಲಿ ಎಲ್ಲರೂ ಕ್ಷೇಮವಾಗಿದ್ದಾರಷ್ಟೆ?

ಯೋಗಾ :—ಮಾತಿಲ್ಲದೆ ಗಿರಿಜೆಯಮುಖವನ್ನೇ ನೋಡಿದನು.

ಗಿರಿ :— ಯಾಕೆ ಮಾತಿಲ್ಲ? ಮನೆಯಲ್ಲಿ ಎಲ್ಲರೂ ಕ್ಷೇಮವಾಗಿದ್ದಾರಷ್ಟೆ?

ಯೋಗಾ ;—ಕ್ಷೇಮವಾಗಿದ್ದಾರೆ. ನೀನು ಹೇಳಿದಂತೆ ಊರುಬಿಟ್ಟು 15 ದಿನಗಳೇನೋ ಆದುವು. ಆದರೆ ನನಗೀಗ ಮನಸ್ಸು ಎರಡು ಕಡೆಗೂ ಭಾಗವಾದಂತಾಗಿದೆ. ಏನು ಮಾಡಲಿ? ಹೊರಡಲಿಕ್ಕೂ ಮನಸ್ಸು ಒಲ್ಲದಂತಾಗಿದೆ.

ಗಿರಿ:— ಯಾಕೆ? ಯಾರ ಅಡ್ಡಿಯಿದೆ?

ಯೋಗಾ : —ಯಾರದೂ ಯಾವದೂ ಅಡ್ಡಿಯಿಲ್ಲ. ನನ್ನ ಮನಸ್ಸೇ ಅಡ್ಡಿಮಾಡುತ್ತಲಿದೆ.

ಗಿರಿ :—ಯಾತಕ್ಕಾಗಿ?

ಯೋಗಾ ;—ಇದೇ ಈಗತಾನೇ ನೀನು ಚೇತರಿಸಿಕೊಳ್ಳುತ್ತ ಬಂದಿದ್ದೀ. ಇನ್ನು ಒಂದುವಾರವಾದರೂ ಇಲ್ಲಿದ್ದು ನಿನ್ನ ಸಂಪೂರ್ಣ ಆರೋಗ್ಯತೆಯನ್ನು ನೋಡಿಕೊಂಡೇ ಹೊರಡೋಣವೆಂದರೆ ಈಗ ಈರೀತಿ ತಂತಿ ಬಂದಿದೆ.

ಗಿರಿ :—ಏನೆಂದು? ಯಾರಕಡೆಯಿಂದ?

ಯೋಗಾ :— "ಅತ್ಯಗತ್ಯದ ಕೆಲಸವಿದೆ. ತಕ್ಷಣವೇ ಹೊರಟು ಬರಬೇಕು. ಮನೆಯವರೆಲ್ಲರೂ ನಿರೀಕ್ಷಿಸುತ್ತಿದ್ದಾರೆ." ಹೀಗೆ ತಮ್ಮನಕಡೆಯಿಂದ ತಂತಿ ಬಂದಿದೆ.

ಗಿರಿ :— ನಾನು ಮೊದಲೇ ಹೇಳಿದೆನಷ್ಟೆ? ನಾಳೆ ಹೊರಡಬಹುದೆಂದು. ಅಷ್ಟು ಅಗತ್ಯದ ಕೆಲಸವಿದ್ದರೆ ಈ ರಾತ್ರಿಯೇ ಹೊರಡಬಹುದು ನನ್ನ ಅಡ್ಡಿಯಿಲ್ಲ

ಯೋಗಾ :—ನಿಜವಾಗಿ, ನಿನ್ನ ಅಡ್ಡಿಯಿಲ್ಲವೆ?

ಗಿರಿ :— ಇಲ್ಲ. ಮನಸ್ಸಾಕ್ಷಿಯಾಗಿಹೇಳುತ್ತೇನೆ. ನಾನು ನಿಮ್ಮನ್ನು ನಿಮ್ಮ ಪತ್ನೀ, ಪುತ್ರ, ಭ್ರಾತೃ, ಮಾತೃ, ಪರಿವಾರಗಳಿಂದ ಅಗಲಿಸಿಕ್ಷಣವಾದರೂ ಇಲ್ಲಿರಿಸಿಕೊಳ್ಳಬೇಕೆಂಬ ಆಶೆಯುಳ್ಳವಳಾಗಿಲ್ಲ. ಮತ್ತು ನನ್ನ ಊಹೆಗೆ ಒಳಪಡು

ವಂತೆ ಸ್ವಜನರನ್ನು ಬಿಟ್ಟುಬಂದ ವಿಚಾರದಲ್ಲಿರುವ ನಿಮ್ಮ ಖಿನ್ನಮುದ್ರೆಯನ್ನು ನೋಡಿ ಸಹಿಸುವ ಶಕ್ತಿಯೂ ನನಗಿಲ್ಲ. ನೀವು ನನ್ನಲ್ಲಿ ಆ ನಿಮ್ಮ ಮನಸ್ಸನ್ನು ಎಷ್ಟೇ ಬಯ್ತಿಡುವೆನೆಂದರೂ ಸಾಧ್ಯವಲ್ಲ?

ಯೋಗಾ:—(ಗಾಬರಿಯಿಂದ) ಗಿರಿ, ಹೀಗೆಲ್ಲಾ ನಿಷ್ಠೂರವನಾಡುತ್ತೀಯಾಕೆ? ಹಾಗೇನಾದರೂ ನನ್ನ ಮನಸ್ಸಿನಲ್ಲಿದ್ದಿದ್ದರೆ ನಾನಿಲ್ಲಿಗೆ ಹೀಗೆ ಭಾವಿಸಿ ಬರುತ್ತಿದ್ದೆನೇ? ಕೆಲಸಬೊಗಸೆಗಳೆಲ್ಲವನ್ನೂ ಬಿಟ್ಟು ನಿನ್ನ ಆರೋಗ್ಯತೆಯನ್ನೇ ಹಾರೈಸುತ್ತ ಕುಳಿತಿದ್ದೆನೇ?

ಗಿರಿ:—ಇಲ್ಲ, ನಾನು ನಿಷ್ಠುರಮಾಡಲಿಲ್ಲ. ಇದ್ದುದನ್ನು ಸ್ಪಷ್ಟವಾಗಿ ಹೇಳಿದೆ. "ಕೊಂಡವರಿಗೆ ಕೋಡಗಮುದ್ದು" ಎಂಬ ಗಾದೆಯುಂಟು. ಒಂದು ದಿನವಲ್ಲದಿದ್ದರೆ ಮತ್ತೊಂದು ದಿನವಾದರೂ ಕೊಂಡ ಅಭಿಮಾನಕ್ಕೆ ಕೋಡಗವನ್ನು ಮುದ್ದಿಸುವದು ಮಾನವ ಧರ್ಮ. ಏನೋ ಮನಸ್ಸು ತಿರಿಗಿ ಬಂದರೆ ಕಣ್ಣಾರೆ ನೋಡುತ್ತ ಸುಮ್ಮನೆ ಹೊರಡಲಾಗದೆ ನಿಂತಿರಿ. ಅದೇನೋ ನನ್ನಮೇಲೆ ಅನುಗ್ರಹ ಮಾಡಿದಂತೆಯೋ ಸರಿ! ಆಮಾತೆಲ್ಲಾ ತೆಗೆದು ಈಗ ಆಡುವದೇಕೆ? ನಾನು ಆರೋಗ್ಯವಾಗಿದ್ದೇನೆ. ನನಗಾಗಿ ನೀವು ನಿಲ್ಲಬೇಕಾಗಿಲ್ಲ.

ಯೋಗಾ:—(ಏನೋ ಜ್ಞಾಪಿಸಿಕೊಂಡಂತೆ ಆತುರದಿಂದ) ಗಿರಿ, ಈಗ ನನ್ನ ಜೊತೆಯಲ್ಲಿ ಬರುತ್ತೀಯೇನು?

ಗಿರಿ:—(ನಸನಗುತ್ತ)ಆಗದ ಹೋಗದ ಮಾತನ್ನು ತೆಗೆದುಕೊಂಡೇನು?

ಯೋಗಾ:—ಯಾಕಾಗಬಾರದು? ಹೇಳು, ಬರುತ್ತೀಯೋ?

ಗಿರಿ—ನಾನೆಂದೂ ಬರಲೊಲ್ಲನೆಂದು ಹೇಳಲಿಲ್ಲ. ಹಿಂದೆ ನಾನಾಗಿ ನಾಲ್ಕಾರು ಬಾರಿ ಕೇಳಿಕೊಂಡಾಗಲೂ ನೀವು ನನಗೆ ಮನಸ್ಸುಬಿಚ್ಚಿ ಉತ್ತರ ಕೊಡಲಿಲ್ಲ. "ನೋಡೋಣ, ಅನುಕೂಲಮಾಡಿಕೊಂಡು ಕರಸುತ್ತೇನೆ" ಎಂದು ತೇಲಿಸಿ ಹೇಳಿಬಿಟ್ಟಿರಿ. ಈಗ ಸುಮ್ಮನೆ ಮುಖೋಲ್ಲಾಸಕ್ಕಾಗಿ ಆಡುವ ಮಾತಿಗೆ ಹಿಗ್ಗಿ ಹಿಗ್ಗಿ ಹಾರಾಡಲೇನು?

ಯೋಗಾ:—(ನಿಟ್ಟುಸಿರಿಟ್ಟು) ಬಿಡು, ಗಿರಿ! ಹಿಂದಿನ ವಿಚಾರವನ್ನು ಬಿಟ್ಟುಬಿಡು. ತಮ್ಮನ ತಂತಿಯಲ್ಲಿಯೂ ನಿನ್ನನ್ನು ಕರೆದುಕೊಂಡೇ ಬರುವಂತೆ ತಿಳಿಸಿದ್ದಾನೆ. ಬಂದರೆ,

ಗಿರಿ:—ನಾನೇನೋ ಸಿದ್ಧವಾಗಿದ್ದೇನೆ. ಯಾವಾಗ ಹೊರಡುತ್ತೀರಿ?

ಯೋಗಾ :—(ನಿಧಾನಿಸಿ) ಆದರೆ ಈಗಲೇ ನೀನು ಹೊರಡುವ ಸ್ಥಿತಿಯಲ್ಲಿಲ್ಲವಲ್ಲಾ ! ಅಲ್ಲಿಗೆ ಬಂದರೆ ಎಷ್ಟಾದರೂ ನಿನಗೆ ಹೊಸದು. ಯಾರ ಪರಿಚಯುವೂ ನಿನಗಿಲ್ಲ. ಯಾರಸ್ವಭಾವವೂ ನಿನ್ನ ಮನಸ್ಸಿಗೆ ಸರಿತೋರಲಾರದು. ಹಾಗಾಗುವದಾದರೆ ನಿನಗೆ ಶ್ರಮವೂ ಮನಃಕ್ಲೇಶವೂ ಹೆಚ್ಚಿ ಪ್ರಕೃತಿ ಮತ್ತೆ ಕೆಡಬಹುದೇನೆಂಬ ಶಂಕೆ !

ಗಿರಿ :—(ತಲೆಯನ್ನು ಕೊಂಕಿಸಿ) ನನಗೇನೂ ಅಂತಹ ಭಯವಿಲ್ಲ. ಆದರೂ ನಿಮ್ಮ ಮನೆಯವರ ಅಭಿಪ್ರಾಯ ತಿಳಿಯದೆ ನಾನು ಈಗಲೇ ಬಂದರೆ ಅಲ್ಲಿ ನಿಮ್ಮವರಿಂದ ನಿಮಗೆ ನಿಷ್ಠುರವೇನಾದರೂ ಬರಬಹುದೋ ಎಂಬ ಅಂಜಿಕೆ. ನನ್ನ ಅಂತಸ್ತಾಪ ವೆಷ್ಟವರೂ ತಡೆಯಬಲ್ಲೆನು. ನಿಮ್ಮ ಮನಸ್ಸಿಗೆ ಇಷ್ಟಾದರೂ ತಾಪವಾಗುವದನ್ನು ನೋಡಿ ನಾನು ಸಹಿಸಲಾರೆ.

ಯೋಗಾ :—(ಅನುಮಾನದಿಂದ) ಹಾಗಾದರೆ, ನಾನು ಅಲ್ಲಿಗೆ ಹೋಗಿ ಅಲ್ಲಿ ಸರಿಯಾದ ಏರ್ಪಾಡು ಮಾಡಿ, ತಾಯಿಯ ಅನುಮತಿಯನ್ನು ಪಡೆದು ನಿನ್ನನ್ನು ಅಲ್ಲಿಗೆ ಕರೆಯಿಸಿ ಕೊಳ್ಳುತ್ತೇನೆ.

ಗಿರಿ :—ಹಾಗೆಯೇ ಮಾಡಿರಿ ಅಲ್ಲಿಗೆ ಹೋದಮೇಲೆ ನಿಮಗೂ ಅವಕಾಶವುಂಟಾಗಿ, ಅನುಕೂಲವೂ ಕಂಡು ಬಂದು, ನನ್ನ ನೆನಪೂ ಆದರೆ ಕರೆಸಿ ಕೊಳ್ಳಿರಿ; ಇಲ್ಲದಿದ್ದರೆ ನಿಮ್ಮ ಸಂತೋಷ. ನೀವು ಹೇಗೆ ಮಾಡಿದರೂ ನನಗೆ ಸಮಾಧಾನವೇ !

ಯೋಗಾ :—(ಗಿರಿಯ ಕೈಹಿಡಿದು) ಆದರೆ ಒಂದು ಮಾತು, ನನ್ನ ಕಾಗದ ಬರುವದು ಸ್ವಲ್ಪ ತಡವಾದರೂ ಮೊದಲಿನಂತೆ ಪ್ರಾಯೋಪವೇಶಮಾಡುವದಾಗಲೀ, ರಾಧಾಮಾಧವನಲ್ಲಿ ಸೇರುವೆನೆಂದು ಹಟತೊಡುವದಾಗಲೀ ಇಲ್ಲವೆಂದು ಮಾತು ಕೊಡು. ಗಿರಿಯು ವಚನವನ್ನಿತ್ತು ಪತಿಯ ಅಪ್ಪಣೆಹೊಂದಿ ಎದ್ದು ಹೋದಳು.

ಯೋಗಾನಂದನು ಧಾರಾಪುರಕ್ಕೆ ಹೊರಟು ಒಂದು ವಾರದ ಮೇಲಾಯಿತು. ಹೋಗಿ ಸೇರಿದುದಕ್ಕೆ ಈವರೆಗೂ ಕಾಗದವಿಲ್ಲ, ಪತ್ರವಿಲ್ಲ. ಪ್ರತಿದಿನವೂ ಅಂಚೆಯವನನ್ನು ಕೇಳಿ ಕೇಳಿ ಗಿರಿಜೆಗೆ ಸಾಕಾಯಿತು. ಆದರೂ ಫಲವಿಲ್ಲ. ಮನಸ್ಸಿಗೆ ಏನೂ ಬೇಕಾಗಿಲ್ಲ. ಮನೆಯಲ್ಲಿ ಗಂಗೆಯೂ ಇಲ್ಲ. ಗಂಗೆಯು ತನ್ನ ಮಗುವಿನೊಡನೆ ತನ್ನೂರಿಗೆ ಹೊರಟು ಹೋದಳು. ಅಕ್ಕನನ್ನು ಬಿಟ್ಟು ಬರಲು ಹೋದ ಶೀನಪ್ಪ ಇನ್ನೂ ಬಂದಿಲ್ಲ. ಗಿರಿಜೆಗೆ ಹೊತ್ತೇ ಹೋಗದಂತಾಯಿತು.

ಗಿರಿಜೆಗೆ ಜೀವನದಲ್ಲಿ ಮತ್ತೆ ಬೇಸರವುಂಟಾಯ್ತು. ನಿದ್ರಾಹಾರಗಳೊಂದೂ ಇಷ್ಟವಿಲ್ಲದಂತಾಯ್ತು. ಆದರೂ ಮಾಧವನ ಆಜ್ಞೆ, ಪತಿಗೆ ತಾನು ಕೊಟ್ಟ ವಚನ, ಪತಿಯು ತನ್ನ ವಚನದಮೇಲೆ ಇರಿಸಿರುವ ಭರವಸೆ, ಇವು ಕ್ಷಣಕ್ಷಣಕ್ಕೂ ನೆನಪಿಗೆ ಬರುತ್ತಿದ್ದುದರಿಂದಲೂ ತಾಯಿತಂದೆಯರನ್ನು ದುಃಖಪಡಿಸಬಾರದೆಂಬ ಸಂಕಲ್ಪದಿಂದಲೂ ಈಸಾರೆ ಉಪವಾಸ ಜಾಗರಗಳನ್ನೇನೂ ಮಾಡದೆ, ತನ್ನ ಮನಸ್ಸಿನ ಕಳವಳವನ್ನು ತನ್ನಲ್ಲಿಯೇ ಅಡಗಿಸಿಕೊಂಡು ಮೇಲೆ ನಗುನಗುತ್ತಲಿದ್ದಳಾದರೂ ಅವಳ ಪ್ರಕೃತಿ ಮಾತ್ರ ದಿನ ದಿನಕ್ಕೆ ದುರ್ಬಲಸ್ಥಿತಿಗೇ ಬರುತ್ತಿದ್ದಿತು.

ಗಂಗಾಬಾಯಿಯನ್ನು ಬಿಟ್ಟುಬರಲು ಹೋದ ಶೀನಪ್ಪನು ತಿರುಗಿ ಬರಲು ೮-೧೦ ದಿನಗಳು ಹಿಡಿದುವು. ಅವನು ಬಂದು ನೋಡಿದಾಗ ಗಿರಿಜೆಯ ಪ್ರಕೃತಿ ಮುನ್ನಿನ ಸ್ಥಿತಿಗೇ ಬರುತ್ತಿದ್ದಂತೆ ತಿಳಿದು ವಿಚಾರಪರನಾದನು. ಹೀಗೆಯೇ ಬಿಟ್ಟರೆ ಪರಿಣಾಮವು ಭಯಂಕರವಾದೀತೆಂದೂ ಒಂದೆರಡು ತಿಂಗಳು ಎಲ್ಲಿಗಾದರೂ ಕರೆದುಕೊಂಡುಹೋಗಿ ತಿರುಗಾಡಿಸಿಕೊಂಡು ಬಂದರೆ ನೆಟ್ಟಗಾಗುವ ಆಶೆಯುಂಟೆಂದೂ ಭಾವಿಸಿದನು. ತನ್ನ ಆಲೋಚನೆಯನ್ನು ತಾಯ್ತಂದೆಯರಿಗೂ ತಿಳುಹಿದನು. ಅವರೂ ಸಮ್ಮತಿಸಿದರು. ಇನ್ನು ಗಿರಿಜೆಯಲ್ಲಿ ಆಲೋಚಿಸುವುದೊಂದೇ ಉಳಿದಿತು.

ಹೀಗೆ ಆಲೋಚನೆಯಲ್ಲಿಯೇ ೩-೪ ದಿನಗಳು ಕಳೆದುವು. ಬಳಿಕ ಗಿರಿಜೆಯಲ್ಲಿ ವಿಚಾರಮಾಡಿದನು. ಗಿರಿಜೆಗೆ ಊರು ಬಿಡುವ ಮನಸ್ಸಿದ್ದಿತಾದರೂ ಮತ್ತೆಲ್ಲಿಗೆ ಹೋಗಲಿಕ್ಕೂ ಮನಸ್ಸಾಗಲಿಲ್ಲ. "ತನ್ನ ಪತಿಯಿಂದ ಇಷ್ಟರಲ್ಲಿ ಆಹ್ವಾನವು ಬಂದೀತು, ತನ್ನನ್ನೂ ಕರಸಿಕೊಳ್ಳುವನು; ತಾನೂ ಇಷ್ಟರಲ್ಲಿಯೇ ಪತಿಸನ್ನಿಧಾನಕ್ಕೇ ಹೋಗಿ ಸೇವೆಗೆ ಸಿದ್ಧಳಾಗುವೆನು" ಎಂಬ ಆಶೆ ಬಲವಾಗಿದ್ದುದರಿಂದ ತಮ್ಮನಿಗೆ ಒಂದು ವಾರದವರೆಗೆ ನೋಡೋಣವೆಂದು ಹೇಳಿದಳು.

ವಾರವೂ ಕಳೆದುಹೋಯ್ತು; ಕಾಗದ ಪತ್ರಗಳೊಂದೂ ಬರಲಿಲ್ಲ. ಶೀನಪ್ಪನು ಕಂಡಕಂಡಾಗಲೆಲ್ಲಾ ಒತ್ತಿಯೊತ್ತಿ ಹೇಳುತ್ತಿದ್ದುದರಿಂದ ಗಿರಿಜೆಗೆ ಮನಸ್ಸು ಬದಲಾಯಿಸಿತು; ಒಂದು ಆಲೋಚನೆಯೂ ಹುಟ್ಟಿತು. ತನ್ನಲ್ಲಿಯೇ ವಿಚಾರ ಮಾಡಿದಳು.

"ನಾನೇ ಯಾಕೆ ಹೋಗಬಾರದು? ಅವರ ಅಪ್ಪಣೆಯನ್ನೇ ಕಾಯಬೇಕೇಕೆ? ನಾನಾಗಿ ಹೋಗುವ ಅಧಿಕಾರ ನನಗಿಲ್ಲವೇ? ನಾನವರಿಗೆ ಅಗ್ನಿಸಾಕ್ಷಿಕವಾಗಿ-ಪರಮಾತ್ಮನ ಸಮ್ಮುಖದಲ್ಲಿ ಧಾರಾಪೂರ್ವಕ ಪರಿಗ್ರಹೀತೆಯಾದ ಪತ್ನಿಯಲ್ಲವೇ? ಹೀಗಿದ್ದೂ ನಾನು ಪ್ರೇಮಕ್ಕೆ ಪರವಶಳಾಗಿ ಬದ್ಧ

ಕಾಡವಳಂತೆ, ಕದ್ದ ಕಳ್ಳಿಯಂತೆ ಬಿದ್ದಿರಲೇಕೆ? ಹಿರಿಯಳಿಗೆ ಇರುವಷ್ಟು ಅಧಿಕಾರವೇ—ಬಾಧ್ಯತೆಯೇ ತನಗೂ ಇಲ್ಲವೇ? ಒಂದುವೇಳೆ ಅವರ ಹಿರಿಯರೆಲ್ಲರೂ ಸಮ್ಮತಿಸಿ ಮಾಡಿದ ವಿವಾಹವಾದುದರಿಂದಲೂ ಜ್ಯೇಷ್ಠ ಪತ್ನಿಯಾದುದರಿಂದಲೂ ● ಆಕೆಗೆ (ಮಾನ್ಯತೆ) ಪೂಜ್ಯತೆಯೂ ಅಧಿಕಾರವೂ ಹೆಚ್ಚಾಗಿಯೇ ಇರಲಿ. ಇದ್ದಮಾತ್ರಕ್ಕೇ ನನಗೂ ಇಲ್ಲವೇ? ಅವರು ಹಿರಿಯರ ಅಭಿಪ್ರಾಯ ಕೇಳದೆಯೇ ತಾವಾಗಿ ಬಂದು ನನ್ನನ್ನು ಒತ್ತಾಯದಿಂದ ವಿವಾಹವಾದರೆಂದು ಅವರ ಹಿರಿಯರು ನನ್ನನ್ನು ತಿರಸ್ಕರಿಸಬಹುದೋ? ನಾನಾಗಿ ಪ್ರಾರ್ಥಿಸಲಿಲ್ಲ, ನನಗೆ ರಾಧಾಮಾಧವನೊಡನೆ ಮದುವೆಯಾಗಿತ್ತು. ನಾನಾತನ ಧ್ಯಾನ ಸೇವಾದಿಗಳಲ್ಲಿ ಸುಖವಾಗಿಯೇ ಇದ್ದೆ; ಇಂತಹ ನನ್ನನ್ನು ಪರಿಪರಿ ಬೋಧನೆಯಿಂದ ಒಪ್ಪಿಸಿ 'ತನ್ನ ಸಂಕಲ್ಪಿತ ಕಾರ್ಯಗಳನ್ನು ಸಿದ್ಧಿಗೊಯ್ಯುವ ಸಹಚಾರಿಣಿ'ಯಾಗೆಂದು ನಿರ್ಬಂಧಿಸಿ ಕೈಹಿಡಿದಮೇಲೆ ಹೀಗೆ ಮಾಡುವುದೇನು-ನೀತಿಯೋ? ರೀತಿಯೋ? ಏನು? ಇಂದಿನವರೆಗೆ ನಾನೂ ಸಹಿಸಿ-ಸಹಿಸಿ ನಿಧಾನಿಸಿ ನೋಡಿದುದಾಯ್ತು, ಹೇಳಿದಂತೆಯೇ ನಡೆದುಕೊಳ್ಳುತ್ತ ಬಂದುದೂ ಆಯ್ತು, ಪಡೆದ ಮಗುವನ್ನು—'ಕಂಟಕನಾಗುವುದರಿಂದ ಬೇರೊಬ್ಬರಿಗೆ ದತ್ತುಕೊಡಬೇಕೆಂದು'ದಕ್ಕೂ ಒಪ್ಪಿ ಮನವನ್ನು ಬಿಗಿಹಿಡಿದು ಕುಳಿತಾಯ್ತು. ಇನ್ನೇನು ತಾನೇ ಮಾಡಲಿ? ನನ್ನ ಕಾಲವೂ ಮುಗಿಯುತ್ತ ಬಂದಿದೆ. ಒಮ್ಮೆಯಾದರೂ ಅತ್ತಕಡೆಗೆ ಹೋಗಿ ಅವರ ಕಡೆಯವರೆಲ್ಲರನ್ನೂ ನೋಡಿ ಬರಬೇಡವೇ? ಅದಕ್ಕೂ ಅಡ್ಡಿಯೇ? ಆಗಲಿ, ಈ ಬಾರಿ ಹೋಗಿ ನೋಡಿಕೊಂಡೇ ಬರುವೆನು. ಅಲ್ಲಿ ಅವರೇನೂ ಹೇಳಲಾರರು. ಅಲ್ಲಿರಲಿಕ್ಕೆ ಅಡಚಣೆಯೇನೂ ಆಗದಿದ್ದರೆ ಒಳಿತೇ. ಒಂದುವೇಳೆ ಅವರ ತಾಯಿ ಮತ್ತು ಇತರ ಆಪ್ತೇಷ್ಟರು ನನ್ನ ಮೇಲಿನ ಸಿಟ್ಟಿನಿಂದ ಅವರಿಗೆ ಕಿರುಕುಳ ವುಂಟುಮಾಡುವುದಾದರೆ ಹೊರಟುಬಂದರಾಯ್ತು. ಒಮ್ಮೆ ಹೋಗಿ ನಾಲ್ಕಾರು ದಿನವಿದ್ದು ಆದಾನ ನಿಧಾನಗಳನ್ನು ನೋಡಿದೆನೆಂದರೆ ಮನಸ್ಸು ಮಾಧಾನವಾಗಿಯೇ ಆಗುವುದು. ಈಗ ಹೇಗೂ ಶೀನು, ನನಗೆ ಎಲ್ಲಿಯಾದರೂ ತಿರುಗಾಡಿ ಬರಲು ಒತ್ತಾಯಪಡಿಸುತ್ತಿರುವನು. ಅಲ್ಲಿಗಿಲ್ಲಿಗೆ ಹೋಗಿ ಬರುವ ಬದಲು ಅವರ ಬಳಿಗೇ ಹೋದರಾಯಿತು'' ಎಂದು ನಿಶ್ಚಯಿಸಿದಳು. ಆದರೂ ''ಅವರಿಂದ ಒಂದು ಚಕಾರ ಶಬ್ದವೂ ಬಂದಿಲ್ಲ, ಹೇಗೆ ಹೋಗುವುದು? ಸ್ವತಂತ್ರಿಸಿ ಹೋದರೆ ಏನೆನ್ನುವರೋ? ಜಿಗುಪ್ಸೆಪಡುವರೋ—ಹೇಗೋ?'' ಎಂಬ ಶಂಕೆಯೂ ಹುಟ್ಟಿತು. ಶೀನಪ್ಪನಿಗೆ ತನ್ನ ವಿಚಾರವನ್ನೆಲ್ಲಾ ಹೇಳಿದಳು. ಶೀನಪ್ಪನೂ ಗಿರಿಜೆಯ ಮನೋಗತವು ಸರಿಯಾಗಿರುವುದೆಂದೂ ಹಾಗೆಯೇ ಮಾಡುವುದೆಂದೂ ಪುಷ್ಟೀಕರಿಸಿದನು, ತಾಯಿತಂದೆಯರ ಸಮ್ಮತಿಯೂ ದೊರೆದಿತು. ಪತಿಗೃಹಕ್ಕೆ ಹೊರಡುವ ನಿರ್ಧಾರವಾಯಿತು.

# XII

ಗಿರಿಜೆ ಪತಿಗೃಹಕ್ಕೆ ಹೊರಡಲು ಮಾತಾಪಿತರ ಸಮ್ಮತಿಯೂ ದೊರೆದಿತು. ದಿನಶುದ್ಧಿ ನೋಡಿ ಪಯಣಕ್ಕೆ ಮುಹೂರ್ತವನ್ನೂ ನೋಡಿದುದಾಯಿತು. ಕರೆದುಕೊಂಡು ಹೋಗಲು ಶೀನಪ್ಪನೂ ಸಿದ್ಧನಾಗಿಯೇ ಇದ್ದನು. ಇಂತಹ ದಿವಸ ಹೊರಡುವೆವೆಂದು ತಂತಿಯ ಮುಖದಿಂದ ವರ್ತಮಾನವನ್ನೂ ಕೊಟ್ಟನು.

ಗಿರಿಜೆ ಪತಿಗೃಹಕ್ಕೆ ಇದೇ ಮೊದಲನೇ ಬಾರಿ ಹೊರಡುವಳಾದುದರಿಂದ ಅವರ ತಾಯ್ತಂದೆಯರ ಮನಸ್ಸಿಗೆ ಸಂತೋಷ ವಿರಹಸಂತಾಪಗಳೆರಡೂ ಉಂಟಾಗಿದ್ದುವು. ಮಗಳಿಗೆ ಕೊಡತಕ್ಕ ವಸ್ತ್ರಭೂಷಣಗಳನ್ನೂ ಭಕ್ಷ್ಯಬಾಗಿನಗಳನ್ನೂ ಫಲವೀಳ್ಯಗಳನ್ನೂ ಸಂಸಾರ ಸಾಹಿತ್ಯ ಸಂಭಾರಗಳನ್ನೂ ಯಥಾಶಕ್ತಿಯಾಗಿ ಸಿದ್ಧಪಡಿಸಿಟ್ಟರು. ಬೀಗರಿಗೆ ಕೊಡುವ ಉಡುಗೊರೆ ಉಚಿತಾದಿಗಳನ್ನೂ ಕಟ್ಟಿರಿಸಿದರು.

ಹೊರಡುವ ದಿವಸ ಮೊದಲಿನ ರಾತ್ರಿ ಗಿರಿಜೆಗೆ ಒಂದೆರಡು ಸ್ವಪ್ನಗಳೂ ಆದುವು. ಸ್ವಪ್ನಫಲವು ಅಷ್ಟುಶುಭ ಸೂಚಕವಲ್ಲವೆಂದೂ ತನ್ನ ಮುಂದಿನ ಜೀವನದಲ್ಲಿ ಅಷ್ಟೇನೂ ಸುಖಗಳುಂಟಾಗುವಂತಿಲ್ಲವೆಂದೂ ತಿಳಿದು ಚಿಂತೆಗೊಳಗಾದಳು. ಆದರೂ 'ಹೊರಟೇತೀರಬೇಕು, ಇದೇ ಅದೃಷ್ಟವನ್ನು ತೂಗುವ ತಕ್ಕಡಿ. ಈ ವೇಳೆಯಲ್ಲಿ ಅಧೈರ್ಯಪಡಬಾರದು, ಮಾಧವನಿದ್ದೇ ಇರುವನು. ಅವನಿಷ್ಟದಲ್ಲಿದ್ದುದಾಗಲಿ !' ಹೀಗೆ ನಿರ್ಧರಿಸಿದಳು.

ಹೊರಡುವ ದಿವಸ ಮಿಂದು ಮಡಿಯುಟ್ಟು ದೇವನಿಗೆ ಹರಕೆ ಹೊತ್ತು ಮೀಸಲಿರಿಸಿ ಬ್ರಾಹ್ಮಣ ಸುವಾಸಿನಿಯರಿಗೆ ದಾನದಕ್ಷಿಣೆ ತಾಂಬೂಲಗಳನ್ನಿತ್ತು ಅವರ ಆಶೀರ್ವಾದವನ್ನೂ ಪಡೆದು ಗುರುಹಿರಿಯರಿಗೆ ನಮಸ್ಕರಿಸಿ ಅವರ ಅನುಗ್ರಹವಾಂತು ಸೋದರನೊಡನೆ ರಾಧಾಮಾಧವನ ಸ್ಮರಣೆಮಾಡುತ್ತ ಪತಿಗೃಹಕ್ಕೆ ಪಯಣಮಾಡಿದಳು.

---

ವಿ. ಸೂ.—ಈ ಪುಸ್ತಕದ ಮೊದಲನೆ ಭಾಗದ ೧–೬೦ ಪುಟಗಳವರೆಗೆ ‘ಬೆಂಗಳೂರು ಶ್ರೀ ಲಕ್ಷ್ಮೀ ನರಸಿಂಹ ಮುದ್ರಾಯಂತ್ರದಲ್ಲಿ’ಯೂ ಎರಡನೆಯ ಭಾಗವು ‘ಮೈಸೂರು ಶ್ರೀಕೃಷ್ಣಾ ಪ್ರೆಸ್ಸಿನಲ್ಲಿ’ಯೂ ಮುದ್ರಿತವಾಗಿರುವುವು ; ಮತ್ತು ರಕ್ಷಾಪತ್ರವೂ ಮೊದಲನೆ ಭಾಗದ ೬೧–೬೪ ಪುಟಗಳೂ ಕಳೆದುಹೋದುದರಿಂದ ‘ಬೆಂಗಳೂರು ಪ್ರೆಸ್ಸಿನಲ್ಲಿ’ ಪುನಃ ಮುದ್ರಿಸಲ್ಪಟ್ಟಿತು—೧೯೨೭.

782—27.

|| ಶ್ರೀಃ ||

# ಗಿ ರಿ ಜಾ ಬಾ ಯಿ

---

## ಎರಡನೆಯ ಭಾಗ.

---

ಧಾರಾಪುರಕ್ಕೆ ಗಿರಿಜಾಬಾಯಿ ಹೊರಟಿರುವದಾಗಿ ತಂತಿವರ್ತಮಾನವು ಮುಟ್ಟಿದೊಡನೆ, ಯೋಗಾನಂದನ ಮನೆಯಲ್ಲಿ ಕೋಲಾಹಲವೆದ್ದಿತು. ಗಿರಿಯ ಆಗಮನ ವಾರ್ತೆಯಿಂದ ಕೆಲವರಿಗೆ ಆನಂದವೂ, ಕೆಲವರಿಗೆ ಅಸೂಯೆಯೂ, ಕೆಲವರಿಗೆ ಕುತೂಹಲವೂ ಉಂಟಾಗಿ; ಯೋಗಾನಂದನನ್ನು ಬೆನ್ನು ತಟ್ಟುವರು ಕೆಲವರು, ಮೋರೆಯನ್ನು ಕೊಂಕಿಸಿಕೊಂಡು ಮರ್ಮೋದ್ಘಾಟನೆಯ ಮಾತುಗಳನ್ನಾಡುತ್ತ ಆತನಮನಸ್ಸಿಗೆ ಖೇದವನ್ನುಂಟುಮಾಡುವರು, ಒಬ್ಬಿಬ್ಬರು; ಇನ್ನುಳಿದವರು ನಿಲ್ಲಿಸಿ ನಿಲ್ಲಿಸಿಕೊಂಡು ಮತ್ತೆ ಮತ್ತೆ ಗಿರಿಜೆಯ ವಿಷಯವನ್ನೇ ಪ್ರಸ್ತಾಪಿಸುವರು. ಯೋಗಾನಂದನಿಗೆ ಗಿರಿಜೆಯು ಬರುವ ವಿಷಯದಲ್ಲಿ ಯಾವ ಅಭಿಪ್ರಾಯವಿದ್ದಿತೋ ದೇವರಿಗೇ ಗೊತ್ತು. ಆತನು ಮಾತ್ರ ಉದಾಸೀನನಂತೆಯೇ ಇರುತ್ತಿದ್ದನು.

ಗಿರಿಜಾಬಾಯಿ ಧಾರಾಪುರಕ್ಕೆ ಬಂದು ಮುಟ್ಟಿದ ದಿನ ಸ್ಟೇಷನ್ನಿಗೆ ಯೋಗಾನಂದನು ಬಂದಿರಲಿಲ್ಲ. ಆತನ ಜ್ಞಾತಿಯೊಬ್ಬನು ಮಾತ್ರ ಇಬ್ಬರು ಆಳುಗಳೊಡನೆ ಗಾಡಿಯನ್ನು ಹೊಡಿಸಿಕೊಂಡು ಬಂದಿದ್ದನು. ಸ್ಟೇಷನ್ ಸಮೀಪಿಸಿದೊಡನೆ ಕಿಟಿಕಿಯ ಕಡೆಗೆ ಮುಖವಿರಿಸಿಕೊಂಡು ಕುಳಿತಿದ್ದ ಗಿರಿಜೆಯೂ, ಶೀನಪ್ಪನೂ ಯೋಗಾನಂದನು ಬಂದಿಲ್ಲವೆಂಬುದನ್ನು ತಿಳಿದು ನಿರುತ್ಸಾಹಿಗಳಾದರು. ಶೀನಪ್ಪನಿಗೆ ಆಗ್ರಹವೂ ಬಂದಿತು. ಗಿರಿಜೆಯ ಮುಖದ ಕಡೆಗೆ ದೃಷ್ಟಿಸಿ; ಅವಳ ಖಿನ್ನಮುದ್ರೆಯನ್ನು ನೋಡಿ " ಅಕ್ಕಾ ನೋಡಿದೆಯೋ? ಆತನು ಬಂದಿಲ್ಲ ಈಗೇನು ಮಾಡಬೇಕು? ನಾನಂತೂ ಹೀಗೆಯೇ ಮುಂದಕ್ಕೆ ಹೊರಡತಕ್ಕವನು " ಎಂದನು.

ಗಿರಿ:—ಶೀನು, ನಿಧಾನಿಸು, ನನಗಾಗಿ ತಾಳ್ಮೆಯನ್ನು ತೆಗೆದುಕೊ! ಅವರು ಯಾಕೆ ಬಂದಿಲ್ಲವೋ ಏನೋ; ಪ್ರಕೃತಿ ನೆಟ್ಟಗಿದೆಯೋ ಅದೇ ನನಗೆ ಶಂಕೆ! ಬಂದವನು ಒಂದೆರಡು ದಿನಗಳಿದ್ದು ಆಮೇಲೆ ನಿನ್ನ ಮನಸ್ಸಿಗೆ ಸರಿತೋರಿದಂತೆ ಮಾಡು- ಎಂದು ಕೇಳಿಕೊಂಡುದರಿಂದ ಶೀನಪ್ಪನು ನಿರುತ್ತರನಾದನು.

ಗಾಡಿ ನಿಂತಿತು. ಆಳುಗಳೊಡನೆ ಬಂದಿದ್ದ ಜ್ಞಾತಿ ಗೋವಿಂದಯ್ಯನು ಶೀನಪ್ಪನು ಕುಳಿತಿದ್ದ ಗಾಡಿಯ ಬಳಿಗೆ ಬಂದು ಕೈಮುಗಿದು “ ಎಲ್ಲರಿಗೂ ಕುಶಲವಷ್ಟೆ ? ಬನ್ನಿರಿ ” ಎಂದನು.

ಶೀನಪ್ಪ:—ಎಲ್ಲಿ, ನಮ್ಮ ಭಾವನವರು ಬಂದಹಾಗೆ ಕಾಣುವುದಿಲ್ಲ. ಊರಲ್ಲಿಲ್ಲವೆ ?

ಗೋವಿಂದ:—ಊರಲ್ಲಿಯೇ ಇದ್ದಾರೆ. ಸ್ಟೇಷನ್ನಿಗೆಮಾತ್ರ ಅವರು ಬಂದಿಲ್ಲ.

ಶೀನಪ್ಪ:—ಮನೆಯಲ್ಲಿ ಎಲ್ಲರೂ ಕುಶಲವಷ್ಟೆ ? ಅವರು ಆರೋಗ್ಯವೇ ?

ಗೋವಿಂದ:—ಎಲ್ಲರೂ ಆರೋಗ್ಯವಾಗಿದ್ದಾರೆ. ಯಾವದೋ ಕೆಲಸದಲ್ಲಿದ್ದದ್ದರಿಂದ ನನ್ನನ್ನು ಕಳಿಸಿದರು.

ಶೀನಪ್ಪನು—‘ ಒಳಿತಾಯ್ತು ’ ಎಂದಿಷ್ಟುಮಾತ್ರ ಹೇಳಿ, ಅಕ್ಕನನ್ನು ಮೆಲ್ಲಗೆ ಇಳಿಸಿ ಸಾಮಾನುಗಳನ್ನು ತೆಗೆದು ಆಳುಗಳ ವಶಕ್ಕೆ ಒಪ್ಪಿಸಿ, ಅಕ್ಕನ ಮುಖವನ್ನು ನೋಡಿದನು. ಗಿರಿಯೂ ಒಮ್ಮೆ ತಮ್ಮನನ್ನು ನೋಡಿದಳು. ಶೀನಪ್ಪನು ಅಕ್ಕನ ಕಣ್ಣುಗಳಲ್ಲಿ ನೀರುತುಂಬಿರುವದನ್ನು ಕಂಡು, ಮರುಮಾತಿಲ್ಲದೆ ಗಾಡಿಯಿಂದ ಇಳಿದನು. ಗೋವಿಂದಯ್ಯನು ಶೀನಪ್ಪನ ಈಪರಿಯ ನಡೆನುಡಿಯನ್ನು ನೋಡಿ ಆತನಿಗೆ ಮನಃಖೇದವಾಗಿರುವದೆಂದರಿತು, ಆತನ ಕೈಹಿಡಿದು ಅನೇಕ ವಿಧದಿಂದ ಸಮಾಧಾನಮಾಡುತ್ತಿದ್ದನು. ಹೊಗೆಗಾಡಿಯು ಹೊರಟುಹೋಯಿತು. ಎತ್ತಿನಗಾಡಿಗೆ ಸಾಮಾನುಗಳನ್ನು ಹಾಕಿಸಿಕೊಂಡು ಆಳುಗಳೂ ನಡೆದರು. ಗೋವಿಂದಯ್ಯನು ಗಿರಿಜೆಯನ್ನೂ, ಶೀನಪ್ಪನನ್ನೂ ಕುದುರೆಗಾಡಿಯಲ್ಲಿ ಕುಳ್ಳಿರಿಸಿ ಅವಳ ಕೈಪೆಟ್ಟಿಗೆಯನ್ನೂ ಇರಿಸಿ ಗಾಡಿಯವನಿಗೆ ಹೇಳಬೇಕಾದುದನ್ನು ಹೇಳಿ ತಾನು ಬೇರೆ ಗಾಡಿಯಲ್ಲಿ ಮುಂದಾಗಿ ನಡೆದನು

ಗಿರಿಯು ಕುಳಿತಿದ್ದ ಗಾಡಿಯು ಆಕೆಯ ಅತ್ತೆಯಮನೆಯಮುಂದೆ ಬಂದು ನಿಂತಿತು. ಬಾಗಿಲಲ್ಲಿ ಯೋಗಾನಂದನ ತಮ್ಮನೂ, ಅಕ್ಕನೂ, ಕೆಲವರು ಹುಡುಗರೂ ನಿಂತು ನೋಡುತ್ತಿದ್ದರು. ಗಾಡಿಯು ನಿಂತೊಡನೆ ಯೋಗಾನಂದನ ಅಕ್ಕನ ಮಗನ ಮಗಳೊಬ್ಬಳು ಬಂದು ಗಿರಿಯ ಕೈಹಿಡಿದು ಒಳಕ್ಕೆ ಕರತಂದಳು. ಗಿರಿಯ ಹಿಂದೆಯೇ ಎಲ್ಲರೂ ಬಂದರು ಗಿರಿಯ ಕೈಹಿಡಿದು ಕರೆದುಕೊಂಡು ಬಂದ ಹುಡುಗಿಯು ಮುಂದಿನ ಅಂಗಳ ಪಡಸಾಲೆ ನಡುಮನೆಗಳನ್ನು ದಾಟಿ ಹಿಂದಿನ ಪಡಸಾಲೆಯಲ್ಲಿ ಸ್ನಾನಮಾಡಿ ಜಪಕ್ಕೆ ಕುಳಿತಿದ್ದ ಮುದುಕಿಯ ಮುಂದೆ ಗಿರಿಯನ್ನು ನಿಲ್ಲಿಸಿದಳು. ಗಿರಿಯು ಆಕೆಯ ಮುಖಭಾವದಿಂದಲೇ ತನ್ನ ಪತಿಯ ಗರ್ಭದಾರ

ಣೆಯೆಂದರಿತು ನೆಲ ಮುಟ್ಟಿ ನಮಸ್ಕರಿಸಿ ಆಬಳಿಕ ಪತಿಯ ಅಕ್ಕನಿಗೂ ನಮಸ್ಕರಿಸಿದಳು. ಮೈದುನನ ಪತ್ನಿಯು ಬಂದು ಗಿರಿಜೆಗೆ ನಮಸ್ಕರಿಸಿದಳು.

ನಮಸ್ಕಾರ ಪುರಸ್ಕಾರಗಳು ಮುಗಿಯುವಷ್ಟರಲ್ಲಿ ಸಾಮಾನುಗಳೆಲ್ಲವನ್ನೂ ಒಳಗೆ ತಂದಿರಿಸಲ್ಪಟ್ಟವು. ಅತ್ತೆ ಮನೆಯವರಿಗೆ ಕೊಟ್ಟಿದ್ದ ಉಡುಗೊರೆ ಫಲವೀಳ್ಯಗಳನ್ನೂ ಸಹ ತಂದು ದೇವರಮುಂದೆ ಇರಿಸಿ ಆ ಬಳಿಕ ನಡುವೆಯಲ್ಲಿ ಬಂದು ಕುಳಿತಳು. ಶೀನಪ್ಪನು ತನ್ನ ಭಾವನು ಆಹ್ನಿಕವನ್ನು ಮುಗಿಸಿ ಹೊರಗೆ ಹೋಗಿದ್ದಾನೆಂದು ತಿಳಿದು ತಾನೂ ಹೊರಗೆ ತಿರುಗಾಡಿ ಬರುತ್ತೇನೆಂದು ಹೊರಟನು. ಆದರೆ ಅಷ್ಟರಲ್ಲಿ ಗೋವಿಂದಯ್ಯನು ಯೋಗಾನಂದನ ತಮ್ಮ ಸೇವಾನಂದ ಕಿವಿಯಲ್ಲಿ ಏನೋ ಹೇಳಲು ಸೇವಾನಂದನು ಶೀನಪ್ಪನನ್ನು ಅತ್ತಿತ್ತ ಬಿಡಗೊಡದೆ ನಿಲ್ಲಿಸಿ ತಾನೇ ಒಲೆಯನ್ನು ಹತ್ತಿಸಿ ಕಾಫೀ ತಯಾರಿಸಿಕೊಟ್ಟು, ಆ ಬಳಿಕ ಸ್ನಾನಕ್ಕೆಂದು ಕರೆದೊಯ್ದನು. ಗಿರಿಜೆಗೆ ಅತ್ತಿಗೆಯು (ಗಂಡನ ಅಕ್ಕ) ಮೈತೊಳೆದುಕೊಳ್ಳಲೆಬ್ಬಿಸಿ ನೀರು, ಮಡಿಸೀರೆಗಳನ್ನು ತಂದುಕೊಟ್ಟು ಆ ಬಳಿಕ ಕುಡಿಯಲಿಕ್ಕೆ ಸ್ವಲ್ಪ ಹಾಲನ್ನು ತಂದಿತ್ತಳು. ಗಿರಿಗೆ ಮೊದಲುದಿನ ರಾತ್ರಿಯೆಲ್ಲಾ ನಿದ್ರೆಯಿಲ್ಲದುದು, ಇಷ್ಟು ಹೊತ್ತಾದರೂ ಉಪಾಹಾರವೇನೂ ಇಲ್ಲದಿದ್ದುದು ಇದರಮೇಲೆ ಮನೆಯವರ ಇದಿರೆ ಕುಳಿತುನಿಂತು ಮಾತನಾಡುವುದಕ್ಕೆ ನಾಚಿಕೆಯೊಂದು, ಯಾರೇನೆನ್ನುವರೆಂಬ ಭಯವೊಂದು ; ಇದರ ಜೊತೆಗೆ ಒಂದು ಇಷ್ಟು ಹೊತ್ತಾದರೂ ಪತಿಯದರ್ಶನ ಲಾಭವಾಗದಿರುವದೊಂದು ಇದೆಲ್ಲಾ ಸೇರಿದುದರಿಂದ ಗಿರಿಜೆಯ ಪ್ರಕೃತಿ ಅಸ್ವಸ್ಥವಾಯಿತು. ಯೋಗಾನಂದನು ಮಾತ್ರ ಬರಲಿಲ್ಲ. ಮಧ್ಯಾಹ್ನ ಮೂರು ಘಂಟೆಗೆ ಊಟವಾಯಿತು. ಊಟವಾದೊಡನೆ ಗಿರಿಜೆಯು ಬಂದು ಚಾಪೆಯಮೇಲೆ ಮಲಗಿದಳು. ಶೀನಪ್ಪನು ಸೇವಾನಂದ ಗೋವಿಂದಯ್ಯರೊಡನೆ ಹೊರಗೆ ಹೊರಟುಹೋದನು. ಗಿರಿಯಬಳಿಯಲ್ಲಿ ಅವಳ ಅತ್ತೆ ಅತ್ತಿಗೆ ಇಬ್ಬರು ಮಾತ್ರಕುಳಿತು ಅವರ ತವರ್ಮನೆಯ ವಿಚಾರವಾಗಿ ಪ್ರಶ್ನಿಸುತ್ತಿದ್ದರು. ಗಿರಿಜೆಯು ಅವರಿಬ್ಬರೂ ಬಂದು ಕುಳಿತುದರಿಂದ ತಾನೂ ಎದ್ದು ಕುಳಿತಳು.

ಇಷ್ಟರಲ್ಲಿ ಯೋಗಾನಂದನ ಪತ್ನಿ ನವವಧು ಬಂದಿರುವಳೆಂಬ ಸುದ್ದಿ, ಆ ಓಣಿ ಬೀದಿಯವರಿಗೆ ತಿಳಿಯಿತು. ಲಕ್ಷ್ಮೀದೇವಮ್ಮನ ಸೊಸೆಯನ್ನು ನೋಡಿ ಹೋಗಲೆಂದು ಬಂದವರು ಕೆಲವರು ; ಯೋಗಾನಂದನ ಹೆಡಗಿನ ಮಡದಿಯನ್ನು ನುಡಿಸಿ ಬರಬೇಕೆಂದು ಬಂದವರು ಕೆಲವರು ; ಸತ್ಯಭಾಮೆಯ ಸವತಿಯ ಸ್ನೇಹ ಮಾಡ ಬಂದವರು ಕೆಲವರು ; ಹೀಗೆ ಬಂದವರು ಗಿರಿಜೆಯನ್ನು ನೋಡಿ ಅವಳ

ಅತ್ತೆ, ಅತ್ತಿಗೆ ಅಕ್ಕ (ಸಪತ್ನಿ) ಇವರ ಬಳಿ ಮಾತನಾಡಿ ಹೊರಟು ಹೋಗುತ್ತಿದ್ದನು. ಸಾಯಂಕಾಲದವರೆಗೆ ಇದೇ ಪ್ರಕಾರ ನಡೆಯಿತು.

ಕತ್ತಲೆಯಾಗುವವರೆಗೆ ಗಿರಿಜೆಯು ಕುಳಿತಿದ್ದಳು. ಆ ಬಳಿಕ ತಲೆಶೂಲೆಯು ತಡೆಯಲಿಕ್ಕೆ ಆಗದಂತಾಯಿತು. ತಾನು ರಾತ್ರಿಗೆ ಏನೂ ತಿನ್ನುವುದಿಲ್ಲವೆಂದೂ ತನಗೆ ಮಲಗಲಿಕ್ಕೆ ಅಪ್ಪಣೆಕೊಡಬೇಕೆಂದೂ ಕೇಳಿಕೊಂಡಳು. ಅತ್ತೆಯು ಆಳಿಗೆ ಹೇಳಿ ಪಡಸಾಲೆಯ ಮುಂದಿನ ಕಿರುಮನೆಯಲ್ಲಿ ಹಾಸಿಗೆ ಹಾಕಿಸಿ ಸೊಸೆಗೆ ಮಲಗಲಿಕ್ಕೆ ಹೇಳಿದಳು. ಗಿರಿಜೆಯು ಒಂದು ಹಾಸಿಗೆಯಲ್ಲಿ ಮುಸುಕಿಟ್ಟು ಮಲಗಿಕೊಂಡಳು. (ಹಾಗೆಯೇ ಸ್ವಲ್ಪ ಕಣ್ಣೀರು ಸುರಿಸಿದ್ದರೂ ಇರಬಹುದು)

ರಾತ್ರಿ ಒಂಭತ್ತು ಘಂಟೆಗೆ ಶೀನಪ್ಪನೂ, ಗೋವಿಂದಯ್ಯನೂ ಬಂದರು. ಶೀನಪ್ಪನು ಅಕ್ಕನು ಮಲಗಿದ್ದಲ್ಲಿಗೆ ಬಂದು ಕುಳಿತನು. ಗಿರಿಜೆಯು ದಣಿದಿದ್ದುದರಿಂದಲೂ ತಮ್ಮನ ಕೂಡ ಏನೇನನ್ನು ಹೇಳಿಕೊಂಡಳೆಂದು ಯಾರಾದರೂ ಏನಾದರೂ ಹೇಳಿಯಾರೆಂಬ ಶಂಕೆಯಿಂದಲೂ ತನಗೆ ತಲೆಶೂಲೆಮಾತ್ರ ಇದ್ದು ನಿದ್ರೆಬರುವಂತಿದ್ದುದರಿಂದ ಮಲಗಿದ್ದೇನೆಂದೂ ಏನೂ ಚಿಂತೆಮಾಡಬೇಡವೆಂದೂ ತಮ್ಮನಿಗೆ ಸಮಾಧಾನ ಹೇಳಿ ಕಳುಹಿಸಿ ಕದವನ್ನು ಹಾಕಿ ಮುಸುಕಿಟ್ಟು ಮಲಗಿದಳು.

ಮನೆಯಲ್ಲಿ ಅಡಿಗೆಯಾಗಿ ಊಟಕ್ಕೆ ಸಿದ್ಧವಾಗಿದ್ದಿತು. ಯೋಗಾನಂದನು ರಾತ್ರಿ ೯ ಘಂಟೆಗೆ ಮನೆಗೆ ಬಂದನು. ಬಂದವನು ನೆಟ್ಟಗೆ ತಾಯಿಯ ಬಳಿಗೆ ಹೊರಟು ಹೋದನು. ಶೀನಪ್ಪನು ಪಡಸಾಲೆಯಲ್ಲಿ ಮಲಗಿ ನೋಡುತ್ತಲಿದ್ದವನು ಭಾವನು ತನ್ನನ್ನು ನೋಡದೆ ಹಾಗೆಯೇ ಒಳಗೆ ಹೊರಟುಹೋದುದನ್ನು ಕಂಡು ಅಸಮಾಧಾನಪಟ್ಟು ಮಾತಿಲ್ಲದೆ ತನ್ನ ಹಾಸಿಗೆಯಮೇಲೆ ಮುಸುಕಿಟ್ಟು ನಿದ್ರೆಹೋಗುವಂತೆ ಮಲಗಿದ್ದನು.

ಯೋಗಾನಂದನು ಒಳಗೆ ಹೋಗಿ ತಾಯಿಯ ಬಳಿಯಲ್ಲಿ ಕುಳಿತನು. ತಾಯಿ, ಅಕ್ಕ ಇವರಿಬ್ಬರು ಏನೇನೋ ಮಾತನಾಡುತ್ತ ಕುಳಿತರು. ಸ್ವಲ್ಪ ಹೊತ್ತಿನಮೇಲೆ ಸತ್ಯಭಾಮೆಯು ಬಂದು ಗಂಡನಕಡೆಗೆ ತಿರುಗಿ ‘ ಯಾಕೆ ಅರ್ಧರಾತ್ರಿಯಾದರೂ ಊಟಕ್ಕೇಳಬಾರದೇ ? ಮಾಡಿದ ಅಡಿಗೆಯೆಲ್ಲಾ ಆರಿಹೋಯಿತು ’ ಎಂದು ಹೇಳಿದಳು. ಪತ್ನಿಯ ಸ್ವರವನ್ನು ಕೇಳಿ ಚಕಿತನಾಗಿ ಒಮ್ಮೆ ತಲೆಯೆತ್ತಿ ನೋಡಿದನು. ಪತ್ನಿಯ ಮುಖದಲ್ಲಿ ತೋರಿಬರುತ್ತಿದ್ದ ರೌದ್ರರಸದಿಂದ ಸ್ವಲ್ಪ ಬೆದರಿದಂತೆಯೂ ಆಗಿ ‘ ಇದೋ ಎದ್ದೆ ’ ಎಂದಿಷ್ಟು ಹೇಳಿ ಊಟಕ್ಕೆದ್ದನು

ಶೀನಪ್ಪನನ್ನು ಊಟಕ್ಕೆ ಕರೆಯಲು ಗೋವಿಂದಯ್ಯನು ಬಂದು ಕೂಗಿ ಕೂಗಿ ದಣಿದು ಉತ್ತರ ದೊರೆಯದೆ ಹೊರಟುಹೋದನು. ಸೇವಾನಂದನೂ ಬಂದು ತಟ್ಟಿ ಎಬ್ಬಿಸಿ ಊಟಕ್ಕೇಳೆನ್ನಲು, ‘ ಹಸಿವಿಲ್ಲ-ಒಲ್ಲೆ ’ ನೆಂದು ಮತ್ತೆ ಮುಸುಕಿಟ್ಟನು. ಕಡೆಗೆ ಯೋಗಾನಂದನೇ ಬಂದು ಬಳಿಯಲ್ಲಿ ನಿಂತು ಮೂರುಬಾರಿ ಕೂಗಿದುದರ ಮೇಲೆ ಶೀನಪ್ಪನು ಹಚ್ಚಡವನ್ನು ಸ್ವಲ್ಪ ಸರಿಸಿಕೊಂಡು ‘ ಇಲ್ಲ, ಸ್ವಾಮಿಾ, ದಯೆಯಿಟ್ಟು ಕ್ಷಮಿಸಿರಿ ನನಗೆ ಹಸಿವಿಲ್ಲ ’ ಮಧ್ಯಾಹ್ನದ ಊಟವೇ ನನಗೆ ಪಚನವಿಲ್ಲ; ಅದರಮೇಲೆ ಆವೇಳೆಯಲ್ಲಿ ಊಟಮಾಡುವ ಅಭ್ಯಾಸವೂ ನನಗಿಲ್ಲ. ರಾತ್ರಿಯೆಲ್ಲಾ ನಿದ್ರೆಯಿಲ್ಲವಾದ್ದರಿಂದ ನನ್ನನ್ನು ಸ್ವಸ್ಥವಾಗಿ ಮಲಗಗೊಡಿರಿ, ಎಂದಿಷ್ಟು ಹೇಳಿ ಮತ್ತೆ ಮುಸುಕಿಟ್ಟು ಮಲಗಿದನು.

ಯೋಗಾನಂದನಿಗೆ ಆತನ ಧಿಟ್ಟತನದ ಉತ್ತರದಿಂದ ಅಸಮಾಧಾನವೂ ತಾನು ಮಧ್ಯಾಹ್ನದಿಂದ ಬಂದು ನೋಡದಿದ್ದುದು ತಪ್ಪಾಯಿತೆಂಬ ವ್ಯಾಕುಲವೂ ಉಂಟಾಗಿ ಮರುಮಾತಿಲ್ಲದೆ ಹೊರಟುಹೋಗಿ ಊಟಕ್ಕೆ ಕುಳಿತನು.

ಊಟಮಾಡಿ ಬಂದಬಳಿಕಲಾದರೂ ಯೋಗಾನಂದನಿಗೆ ಪಾಪ, ಬಿಡುವಾಗಲಿಲ್ಲ. ಸಂಗಡಿಗರಕೂಡ ಮಾತನಾಡುತ್ತ ಕುಳಿತುಕೊಳ್ಳಬೇಕಾಯಿತು. ಶೀನಪ್ಪನನ್ನು ಎಬ್ಬಿಸಿ ನಾಲ್ಕು ಒಳ್ಳೆಯ ಮಾತನ್ನಾಡೋಣವೆಂದರೆ ಕೂಡ ಅವಕಾಶವಾಗಲಿಲ್ಲ. ಸಂಗಡಿಗರೆಲ್ಲಾ ಹೊರಟುಹೋದಬಳಿಕ, ಯೋಗಾನಂದನು ಎದ್ದು ಬಂದು ನಡುಮನೆ, ಊಟದಮನೆ, ಅಡಿಗೆಮನೆ, ಹಿಂದಿನ ಅಂಗಳ ಎಲ್ಲಾ ಕಡೆಯನ್ನೂ ಕುತೂಹಲಗೊಂಡವನಂತೆ ನೋಡಿದನು. ನಿರೀಕ್ಷಿಸಿದವಸ್ತು ಗೋಚರಿಸದಿದ್ದುದರಿಂದಲೋ ಏನೋ ಸ್ವಲ್ಪ ಖಿನ್ನನಾಗಿ ಅಡಿಗೆಮನೆಗೆ ಬಂದು ಮೆಲ್ಲನೆ ತಾಯಿ-ಪತ್ನಿ ಇಬ್ಬರಮುಖವನ್ನು ನೋಡುತ್ತ ಕೇಳಿದನು “ ಎಲ್ಲರಿಗೂ ಊಟವಾಯ್ತಷ್ಟೆ ” ಸತ್ಯಬಾಮೆಯಿಂದ ಉತ್ತರವು ದೊರೆದಿತು ‘ ಊಂ, ಮನೆಯವರಿಗೆಲ್ಲಾ ಆಯ್ತು ’

ಯೋಗಾ—ಎಂದರೆ ? ನಿನಗೂ ಆಯ್ತೋ-ಇಲ್ಲವೋ ?

ಸತ್ಯ—ನನಗೂ ಆಯ್ತು, ಯಾಕೆ ? ಏನಾಗಬೇಕು ?

ಯೋಗಾ—‘ ನನಗೇನೂ ಬೇಕಾಗಿಲ್ಲ. ಹೊತ್ತು ಬಹಳವಾಯ್ತು. ಇನ್ನೂ ಕೆಲಸ ಮಾಡುತ್ತಿದ್ದೀರೆಂದು ನೋಡಬಂದೆ. ’ ಹೀಗೆಹೇಳಿ ಹೊರಟುಬರುತ್ತಿದ್ದಾಗ ಆತನ ಅಕ್ಕನು ‘ ಯೋಗಾ, ಗಿರಿಬಾಲೆ ಊಟಮಾಡಿಲ್ಲ, ಹಾಲನ್ನು ಕೂಡ ಒಲ್ಲೆ ನೆಂದು ಹೇಳಿ ಮಲಗಿಬಿಟ್ಟಳು. ಮಧ್ಯಾಹ್ನವೂ ಸರಿಯಾಗಿ ಊಟಮಾಡಲಿಲ್ಲ, ಎಂದಳು.

ಯೋಗಾ—ಯಾಕಂತೆ! ಊಟಬಿಡಲಿಕ್ಕೇನಾಗಿದೆಯಂತೆ?

ಅಕ್ಕ—ಏನೋ ತಲೆಶೂಲೆ ಸಹಿಸಲಿಕ್ಕಾಗುವಂತಿಲ್ಲವೆಂದು ಹೇಳಿ ಮಲಗಿಬಿಟ್ಟಳು. ರಾತ್ರಿಯೆಲ್ಲಾ ನಿದ್ರೆಯಿಲ್ಲವಂತೆ. ಹೊರಗಿನ ಕಿರುಮನೆಯಲ್ಲಿ ಮಲಗಿದ್ದಾಳೆ. ಹೋಗಿ ನೋಡಿ ವಿಚಾರಿಸು.

ಯೋಗಾನಂದನು ತನ್ನಲ್ಲಿಯೇ ಏನನ್ನೋ ಹೇಳಿಕೊಳ್ಳುತ್ತ ಗಿರಿಯು ಮಲಗಿದ್ದ ಕಿರುಮನೆಗೆ ಬಂದು ಇಣಿಕಿನೋಡಿದನು ಗಿರಿಜೆಯು ಮುಸುಕಿಟ್ಟು ಮಲಗಿದ್ದಳು. ಯೋಗಾನಂದನು ಸ್ವಲ್ಪ ಮುಂದೆ ಬಂದು ಮೆಲ್ಲನೆ ಎರಡುಬಾರಿ ಕೂಗಿದನು. ಉತ್ತರವೇನೂ ಬರಲಿಲ್ಲ. ಮತ್ತೆರಡುಸಲ ಕೂಗಿದನು. ಗಿರಿಗೆ ನಿಜವಾಗಿಯೂ ನಿದ್ರೆ ಬಂದಿದ್ದುದರಿಂದ ಆಗಲೂ ಉತ್ತರವಿಲ್ಲದಿರಲು ಯೋಗಾನಂದನು 'ಬಿಡು, ನಿದ್ರೆ ಬಂದಿದೆ' ಎಚ್ಚರಿಸಬಾರದು. ಹೀಗೆ ಹೇಳಿ ಬಾಗಲಿಗೆ ಬರುವಷ್ಟರಲ್ಲಿ ಸತ್ಯಭಾಮೆಯು ಬಂದು 'ಯಾಕೆ, ಏನೂ ಹೇಳಲಿಲ್ಲವೇನು? ನೀವಾದರೂ ಹೇಳಿದ್ದರೆ ತಿನ್ನುತ್ತಿದ್ದಳೇನೋ' ಎಂದಳು. ಯೋಗಾನಂದನು ಹುಬ್ಬು ಗಂಟಿಕ್ಕಿಕೊಂಡು, 'ಕೊಡಲಿಕ್ಕೂ ಬಿಡಲಿಕ್ಕೂ ನನಗೆ ಹೇಳಬೇಡ' ಎಂದು ಹೇಳಿ ಮರುಮಾತಿಲ್ಲದೆ ಹೊರಟುಹೋಗಿ ತಾನೂ ಮಲಗಿಬಿಟ್ಟನು.

ಬೆಳಗಾಗುವ ಮೊದಲೇ ಗಿರಿಯು ಎದ್ದು ಹಿತ್ತಲಿಗೆ ಹೋಗಿ ಕೈಕಾಲು ಮುಖಗಳನ್ನು ತೊಳೆದುಕೊಂಡು ಬಂದು ದೇವರಿಗೂ ಅತ್ತೆಗೂ ನಮಸ್ಕಾರ ಮಾಡಿ, ತನ್ನ ಅಕ್ಕತಂಗಿ (ಸವತಿ, ಓರಗಿತ್ತಿ) ಯರು ಮಾಡುತ್ತಿದ್ದ ಕಸಮುಸುರೆಗಳಿಗೆ ತಾನೂ ನೆರವಾಗಲು ಹೋದಳು. ಆದರೆ ಅತ್ತೆ, ತಡೆದುದರಿಂದಲೂ, ಅಕ್ಕನು ಮುಟ್ಟಗೊಡದಿದ್ದುದರಿಂದಲೂ ಮತ್ತೆ ಬಂದು ಕಿರುಮನೆಯಲ್ಲಿ ಕುಳಿತಳು. ತಲೆಶೂಲೆ ಇನ್ನೂ ಇಳಿದಿರಲಿಲ್ಲ. ಅಷ್ಟರಲ್ಲಿ ಶೀನಪ್ಪನು ಬಂದು ಹತ್ತಿರ ಕುಳಿತನು.

ಗಿರಿ—ಶೀನು, ಏನು ಹೇಳಿದರು-ನಿನಗೆ?

ಶೀನಪ್ಪ—ನನ್ನೊಡನೆ ಇನ್ನೂ ಏನೂ ಹೇಳಿಲ್ಲ ನಾನಂತೂ ಈದಿನ ಹೊರಟೇತೀರಬೇಕು. ನಿಲ್ಲಲಿಕ್ಕಿಲ್ಲ. ನೀನೂ ಬರುವುದಾದರೆ ಒಂದೆರಡು ತಿಂಗಳು ಸ್ವಲ್ಪ ಎಲ್ಲಿಯಾದರೂ ತಿರುಗಾಡಿ ಬರಬಹುದು. ಏನು ಹೇಳುತ್ತೀ?

ಗಿರಿ—ಶೀನು, ನಿನ್ನೆ ಬಂದು ಈಗಲೇ ನಾನು ಹೊರಟರೆ, ಸರಿಯಾಗಿ ತೋರುವದೇ? ನಿಲ್ಲಲು ನಿನಗೆ ಅನನುಕೂಲವಾದರೆ ನೀನು ಹೋಗು.

ಶೀನಪ್ಪ—ಇಲ್ಲಿ ನಿನಗೆ ಆರೈಕೆ ಹೇಗಾಗಬೇಕು?

ಗಿರಿ—(ನಕ್ಕು) ಶೀನು, ಇಲ್ಲಿ ಎಲ್ಲರಿಗೂ ಆದ ಆರೈಕೆ, ನನಗೂ ಆದರೆ ಸಾಕು. ನನ್ನ ವಿಚಾರವಾಗಿ ನೀನೇನೂ ಯೋಚಿಸಬೇಡ.

ಶೀನಪ್ಪ—ಹಾಗಾದರೆ ನಿನ್ನ ಇಷ್ಟ. ನಾನು ಈಗ ಹೋಗುತ್ತೇನೆ. ಗಿರಿಯಕ್ಕ ! ನಿನಗಿಲ್ಲಿ ಸರಿಬರದಿದ್ದರೆ, ನಿನ್ನ ಪ್ರಕೃತಿಕೆಟ್ಟರೆ, ನನಗೆ ಬರೆದು ತಿಳಿಸು; ನಾನು ಒಡನೆ ಬಂದು ಕರೆದುಕೊಂಡುಹೋಗುತ್ತೇನೆ ಹೇಗೂ ನಾನು ಇತ್ತ ಕಡೆಗೆ ಇನ್ನು ಎರಡುತಿಂಗಳಲ್ಲಿ ಬರಬೇಕಾಗುತ್ತದೆ. (ಹೀಗೆ ಹೇಳಿ ಎದ್ದು ಹೊರಗೆ ಹೋದನು ಗಿರಿಜೆಯು ತಲೆಶೂಲೆಗಾಗಿ ಮತ್ತೆ ಹಾಸಿಗೆಯಲ್ಲಿ ಮಲಗಿದಳು.)

ಗಂಡಸರೆಲ್ಲರೂ ಎದ್ದು ಮುಖಗಳನ್ನು ತೊಳೆದುಕೊಂಡುಬಂದು, ತಾವೇ ಗುಂಪುಕೂಡಿ ಕುಳಿತು ಕಾಫಿಯನ್ನು ತಯಾರಿಸಿದರು. ಸೇವಾನಂದನು ಶೀನಪ್ಪನ ಕೈಹಿಡಿದು ಕರೆದುಕೊಂಡು ಹೋಗಿ ಯೋಗಾನಂದನ ಒಳಿಯಲ್ಲಿ ಬಿಟ್ಟನು. ಯೋಗಾನಂದನು ಶೀನಪ್ಪನ ಕೈಹಿಡಿದು ನಸುನಗುತ್ತ ‘ ಬಾರಯ್ಯ, ನನ್ನ ಮೇಲೆ ಅಸಮಾಧಾನಗೊಳ್ಳಬಾರದು. ನಿನ್ನೆ ನಾನು ಕೆಲವೊಂದು ಅಸಿವಾರ ಪ್ರಸಂಗ ದಲ್ಲಿ ಸಿಕ್ಕಿ ಹೊರಗೆ ಹೋಗಿದ್ದವನು ಮನೆಗೆ ಬರಲಿಕ್ಕೇ ಆಗಲಿಲ್ಲ. ಅಷ್ಟಕ್ಕೇ ಬೇರೆ ಬೇರೆಯಾಗಿ ಅರ್ಥಮಾಡಿಬಿಟ್ಟಂತೆ ಕಾಣುತ್ತದೆ ಇರಲಿ, ನಿಧಾನವಾಗಿ ಮಾತನಾಡುವ ಕುಳಿತು ಕಾಫಿಯನ್ನು ಕುಡಿ ’ ಎಂದು ಕುಳ್ಳಿರಿಸಿಕೊಂಡನು.

ಶೀನಪ್ಪ—ಸರಿಯೆ ; ನೀವು ದೊಡ್ಡವರು-ಶ್ರೀಮಂತರು. ಬೇಕಾದಂತೆ ಮಾಡಬಹುದು. ನಿಮ್ಮ ಅಪ್ಪಣೆಯಿಲ್ಲದೆ, ನಿಮ್ಮ ಅಭಿಪ್ರಾಯ ತಿಳಿಯದೆ, ನಾವು ಬಂದುದು ನಮ್ಮದೇ ಅಪರಾಧ ! ಅಪರಾಧಕ್ಕೆ ಶಿಕ್ಷೆಯಾಗಲೇಬೇಕಾದುದು ಆಯ್ತು. ಇದರಲ್ಲಿ ತಮ್ಮ ದೋಷವೇನೂ ಇಲ್ಲ.

ಸೇವಾ—ಶೀನಪ್ಪ, ಹೀಗೆ ಇಲ್ಲದ್ದನ್ನು ಕಲ್ಪಿಸಿಕೊಂಡು ಖತಿಗೊಳ್ಳ ಬಾರದು. ನೀವೇನೂ ನಮ್ಮಮನೆಗೆ ಬೇಡಿದರೂ ಬರತಕ್ಕವರಲ್ಲ. ನಿಮ್ಮ ಅಕ್ಕನದೆಸೆಯಿಂದ ಬಂದಿರಿ ; ನಿಮ್ಮನ್ನು ನಾವು ಯೋಗ್ಯರೀತಿಯಿಂದ ಸ್ವಾಗತಿಸದಿ ದ್ದುದು ನಮ್ಮ ಅಪರಾಧ. ಅಷ್ಟುಹೊರತು, ಅವರು, ತಮ್ಮಮನೆಗೆ ತಾವು ಬರಲಿಕ್ಕೆ ಅಪ್ಪಣೆಯಾಗಲೇಬೇಕೆಂದು ನಿರೀಕ್ಷಿಸಬೇಕೆಂಬ ನಿರ್ಬಂಧವಿಲ್ಲ. ಆಗಲೇ ಬರಬಹುದಾಗಿತ್ತು.

ಶೀನಪ್ಪ—ಆಹಾ ? ಹಾಗೆ, ಅಷ್ಟುಮಟ್ಟಿನ ಬಾಧ್ಯತೆಯೂ ಭಾಗ್ಯವೂ ಇದ್ದಿರಬಹುದೆಂದು ನನಗೇನೋ ಧೈರ್ಯವಿಲ್ಲ. ಈಗಲೇ ನಾನೇಕೆ ಬಾಯ್ದೆರೆಯಲಿ ? ಮುಂದೆ ಮಾತಿಗೆ ಬೆಲೆಯನ್ನು ನೋಡುವದಿದೆ. ಹೋಗಲಿ, ಆ ಪ್ರಸ್ತಾಪ ನನಗೆ ಬೇಡ. ಏನು, ಭಾವನವರೇ ! ನಿಮ್ಮದಾಗಿ ನಮ್ಮ ಬಳಿಯಲ್ಲಿದ್ದ ವಸ್ತುವನ್ನು ನಿಮಗೆ ತಂದೊಪ್ಪಿಸಿದ್ದೇವೆ. ನಿಮ್ಮದೆಂದು ಒಪ್ಪಿಸಿಕೊಳ್ಳುವುದಾದರೆ ಸಂತೋಷ.

ಯೋಗಾ—ಹಾಗೆಂದರೆ ?

ಶೀನಪ್ಪ—ಮತ್ತೇನೂ ಇಲ್ಲ ನಿಮ್ಮ ಪತ್ನಿಯನ್ನು ಕರೆದುತಂದು ಬಿಟ್ಟು ದೇನೋ ಆಯಿತು ; ಅದು ತಮಗೆ ಸಮ್ಮತವೋ ಅಲ್ಲವೋ ನನಗೆ ಗೊತ್ತಿಲ್ಲ. ನಾನೇನೋ ಈ ಮಧ್ಯಾಹ್ನದ ಮೇಲಿಗೆ ಹೊರಡಲೇಬೇಕು. ನಿಮ್ಮ ಪತ್ನಿಯನ್ನಿಲ್ಲಿ ಬಿಟ್ಟು ಹೋಗೆನ್ನುತ್ತೀರೋ ಅಥವಾ ಕರೆದೊಯ್ಯಲಿಕ್ಕೆ ಹೇಳುತ್ತೀರೋ ?

ಯೋಗಾ—ಎಲ್ಲಿಗೆ ಕರೆದೊಯ್ಯುತ್ತೀರಿ ?

ಶೀನಪ್ಪ—ಎಲ್ಲಿಗೆಂದರೆ, ಹವೆ ಬದಲಾಯಿಸಲಿಕ್ಕೆ ಕೆಲವುಕಾಲ ಎಲ್ಲಿಯಾದರೂ ಕರೆದುಕೊಂಡು ಹೋಗಿಬರಲು :—

ಯೋಗಾ—ಹಾಗಿದ್ದರೆ ಇಲ್ಲಿಗೆ ಬಂದಿರೇಕೆ ?

ಶೀನಪ್ಪ—ನನಗೇನೋ, ಇಲ್ಲಿಗೆ ಬರುವದು ನಿಮ್ಮ ಅಭಿಮತವಲ್ಲವೆಂದು ಗೊತ್ತಿತ್ತು ; ಆದರೂ ಗಿರಿಯಕ್ಕನ ಆಶಾಭಂಗಮಾಡಲಾರದೆ ಇಲ್ಲಿಗೆ ಮೊದಲು ಬರಬೇಕಾಯ್ತು.

ಯೋಗಾ—ನನ್ನ ಅಭಿಪ್ರಾಯ ಹೇಗೇ ಇರಲಿ; ಆಕೆಯ ಅಭಿಪ್ರಾಯವೇನು ?

ಶೀನಪ್ಪ—ಆಕೆ, ಈಗಲೇ ಬರಲೊಲ್ಲೆನೆನ್ನುತ್ತಾಳೆ.

ಯೋಗಾ—(ನಸುನಗುತ್ತ) ಹಾಗೆಂದರೆ ನೀವು ಕರೆದೊಯ್ಯುವುದೆಂತು ?

ಶೀನಪ್ಪ—ಮತ್ತೇನು ಮಾಡಬೇಕು ? ನೀವೇ ಬಿಟ್ಟುಹೋಗಬೇಡೆಂದರೆ ?

ಯೋಗಾ—(ನಗುತ್ತ) ಹಾಗೆಂದಕಾಲಕ್ಕೆ ನೋಡಿಕೊಳ್ಳೋಣ ; ಆದರೂ ಮನೆಯವರು ಮನೆಗೆ ಬಂದು ತಮ್ಮ ಬಾಧ್ಯತೆಯನ್ನು ಸ್ಥಾಪಿಸಿ ನಿಂದರೆ, ನಮ್ಮ-ನಿಮ್ಮಿಂದ ಹೊರಡಿಸಲಕ್ಕಾದೀತೇ ? ಇರಲಿ, ಈಗ ನಿಮ್ಮ ಅಕ್ಕನ ಪ್ರಕೃತಿ ನೆಟ್ಟಗಿದೆಯಷ್ಟೆ ?

ಶೀನಪ್ಪ—ಓಹೋ ! ಈಗಿರುವಂತೆಯೇ ಇನ್ನು ಒಂದೆರಡುತಿಂಗಳು ಇದ್ದರೆಂದರೆ ಎಲ್ಲಾ ನೆಟ್ಟಗಾಗಿಯೇ ಆಗುತ್ತದೆ ! ಏನಾದರೂಮಾಡಿರಿ, ನನಗಪ್ಪಣೆಯಷ್ಟೆ ?

ಯೋಗಾ—ಆಮೇಲೆ ಹೇಳುತ್ತೇನೆ ಈಗ ಸ್ವಲ್ಪ ನಿಧಾನಿಸಿ. ಸಿಟ್ಟು ಮಾಡಬೇಡಿರಿ.

ಇಷ್ಟರಲ್ಲಿ ಗಿರಿಜೆಗೆ ಒಂದು ಕಪ್ಪು ಕಾಫಿಯನ್ನು ಕಳುಹಿಸಿದ್ದುದು, ಅವಳು ಬೇಡವೆಂದುದರಿಂದ ವಾಪ್ಸು ಬಂದಿತು. ಅದನ್ನು ನೋಡಿ ಸೇವಾನಂದನು "ಯಾಕೆ, ನಿಮ್ಮ ಅಕ್ಕನಿಗೆ ಕಾಫೀಕುಡಿಯುವ ಅಭ್ಯಾಸವಿಲ್ಲವೇನು?" ಎಂದನು.

ಶೀನಪ್ಪ—ಕಾಫೀಕುಡಿಯುವುದುಂಟು; ಆದರೆ, ಈದಿನ ಬೇಡವಾಗಿರಬಹುದು. (ಇನ್ನೂ ಎಷ್ಟೋ ಮಾತುಕಥೆಗಳು ನಡೆದು ಕಡೆಗೆ ಶೀನಪ್ಪನಿಗೆ ಸಮಾಧಾನವಾಯಿತು; ಆದಿನ ಹೊರಡುವುದೂ ನಿಂತು ಮರುದಿನ ಹೊರಡುವ ನಿಶ್ಚಯವಾಯಿತು ಗಂಡಸರೆಲ್ಲರೂ ಎದ್ದರು. ಕೆಲವರು ಕೆಲಸಕ್ಕಾಗಿ ಹೊರಟರು; ಕೆಲವರು ಸ್ನಾನಕ್ಕೆದ್ದರು)

---

ii

ಗಿರಿಜಾಬಾಯಿ ಅತ್ತೆಯಮನೆಗೆಬಂದು ಒಂದೆರಡು ವಾರವಾಗಿ ಹೋಯಿತು. ಶೀನಪ್ಪನು ಹಿಂದಿರುಗಿ ಹೊರಟುಹೋದನು. ಗಿರಿಜೆಯಪ್ರಕೃತಿ ಹೇಗಿದೆಯೆಂಬುದು ಯಾರಿಗೂ ತಿಳಿಯದು. ಬಂದ ಮೂರುನಾಲ್ಕುದಿವಸಗಳವರೆಗೆ ಪತಿಪತ್ನಿಯರು ಕುಳಿತುಮಾತನಾಡಿದುದಿಲ್ಲ. ಯಾವುದನ್ನಾದರೂ ಕೊಡಬೇಕಾದರೆ ಹುಡುಗರ ಕಡೆಯಿಂದ ಕಳುಹಿಸುತ್ತಿದ್ದನು. ಗಿರಿಜೆಯು ಅದನ್ನು ತನಗೆ ಬೇಕಾಗಿಲ್ಲವೆಂದು ಹೇಳಿ ಹಿಂತಿರುಗಿಸಿ ಬಿಡುತ್ತಿದ್ದಳು. ನಾಲ್ಕನೇದಿನದಿಂದ ಹೊರಗೆ ತಿರುಗಾಡುವಾಗ ಏನಾದರೂ ಇದಿರಾಗಿಬಂದು ಕಂಡನೆಂದರೆ ಅಹುದೋ ಅಲ್ಲವೆನ್ನುವಷ್ಟು ಸಣ್ಣನಗೆ-ಮೆಲ್ಲುಲಿಯಲ್ಲಿ 'ಪ್ರಕೃತಿ ಹೇಗಿದೆ' ಎಂದಾಗಲಿ 'ಊಟವಾಯಿತೆ' ಎಂದಾಗಲಿ 'ಮಲಗಿದ್ದೆಯೇನೆಂದಾಗಲಿ' ಮಾತನಾಡಿಸುತ್ತಿದ್ದನು. ಗಿರಿಯು ಆತನ ಪ್ರಶ್ನೆಯಂತೆ ತಾನೂ ಸಂಕುಚಿತವಾಗಿಯೂ ಸಂಗ್ರಹವಾಗಿಯೂ ಉತ್ತರವನ್ನು ಕೊಟ್ಟು ಬರುತ್ತಿದ್ದಳು.

ಗಿರಿಗೆ ಯಾವಯಾವ ಬಗೆಯಾಗಿ ನೋಡಿದರೂ ಸಮಾಧಾನವೆಂಬುದೇ ದೊರೆಯುವಂತಿಲ್ಲ. ಹೊರಗಿನ ಸಣ್ಣಪುಟ್ಟ ಕೆಲಸಗಳಿಗಾದರೂ ಇವಳನ್ನು ಸೇರಿಸುತ್ತಿರಲಿಲ್ಲ. ಊಟದವೇಳೆಯಲ್ಲಿವಿನಾ ಇವಳಿಗೆ ಬೇರೆ ಸಮಯದಲ್ಲಿ ಅಡಿಗೆಯ ಮನೆಯ ಪ್ರವೇಶವಾಗುತ್ತಿರಲಿಲ್ಲ. ಮಾಡಲಿಕ್ಕೆ ಕೆಲಸವಿಲ್ಲ; ನುಡಿಸಲಿಕ್ಕೆ ತಮ್ಮವರ ಬಳಗವಲ್ಲ, ಮನೆಯವರೆಲ್ಲರೂ ತನ್ನನ್ನು ಬೇರೆಯಾಗಿಯೇ ತಿಳಿಯುತ್ತಿರುವರು. ಹಾಡಲಿಕ್ಕೆ ನಲವೆಂಬುದೇಇಲ್ಲ; ಇನ್ನು ಮಾಡುವುದೇನು? ಬರೆದೋದಲಿಕ್ಕೆಂದರೂ

ಬೇಸರಿಕೆ, ದಣಿ-ಮನೆಯವರ ಹೆದರಿಕೆ! ಅದರಲ್ಲಿಯೇ ಯಾರೂ ಇಲ್ಲದಾಗ ಕಿರು ಮನೆಯ ಬಾಗಿಲನ್ನು ಮುಚ್ಚಿಕೊಂಡು ಮೆಲ್ಲನೆ ಓದಿಕೊಳ್ಳುವಳು. ಇಷ್ಟರಿಂದ ವೇಳೆ ಕಳೆಯುವುದೇ ಕಷ್ಟವಾಯಿತು. ಕಷ್ಟವು ಹೆಚ್ಚಿದಾಗ ಕೃಷ್ಣನ ನೆನಪಾಗುವದು, ಸಂಕಟಬಂದಾಗ ವೆಂಕಟರಮಣ ಎನ್ನುವದು, ಸಹಜವಷ್ಟೆ? ಗಿರಿಜಾಬಾಯಿಗಾದರೂ ಹಾಗೆಯೇ ಆಯಿತು. ಒಬ್ಬಳೇ ಕುಳಿತು ನಿಂತು ಮಲಗಿಕೊಂಡಿದ್ದಾಗಲೆಲ್ಲಾ ರಾಧಾಮಾಧವನ ಧ್ಯಾನದಿಂದಲೇ ಪರವಶಳಾಗಿ ಆ ಮೂಲಕ ಹೊತ್ತು ಕಳೆಯುತ್ತಿದ್ದಳು.

ಶೀನಪ್ಪನು ಹೊರಟುಹೋದಬಳಿಕ ಗಿರಿಯ ಪ್ರಕೃತಿಯ ವಿಚಾರವಾಗಿ ಎರಡು ಕಾಗದಗಳನ್ನು ಬರೆದಿದ್ದನು. ಯೋಗಾನಂದನಿಂದ ಉತ್ತರವು ದೊರೆಯಲಿಲ್ಲ. ತಂತಿ ಬಂದಿತು. ಅದಕ್ಕೂ ಉತ್ತರವು ಹೋಗಲಿಲ್ಲ. ಕಡೆಗೆ, ಗಿರಿಜಾಬಾಯಿಗೇ ಶೀನಪ್ಪನಿಂದಲೂ ಅವಳ ಅಕ್ಕನಿಂದಲೂ ಎರಡು ಕಾಗದಗಳು ರಿಜಿಸ್ಟರಾಗಿ ಬಂದವು.

ಇಲ್ಲಿಗೆ ಗಿರಿಬಂದು ೧೫ ದಿನಗಳಮೇಲಾಗಿದ್ದಿತು. ಇಷ್ಟು ದಿನಗಳಲ್ಲಿ ಒಮ್ಮೆಯಾದರೂ ಯೋಗಾನಂದನು ಪತ್ನಿಯ ಕಿರುಮನೆಯೊಳಗೆ ಒಂದು ಕುಳಿತಿಲ್ಲ. ಆತನಾವಾಗಲಾದರೂ ಬಂದರೂ ಮನೆಯವರಾರಾದರೂ ಏನಾದರೊಂದು ನೆವದಿಂದ ಬಂದುಬಿಡುತ್ತಿದ್ದುದರಿಂದ ಹೊರಟು ಹೋಗುತ್ತಿದ್ದನು. ಸ್ನಾನಪಾನಗಳಿಗೆ ನೀರನ್ನು ಕೊಡಲಿಕ್ಕಾದರೂ ಇವಳಿಗೆ ಅವಕಾಶಕೊಡಲ್ಪಡುತ್ತಿರಲಿಲ್ಲವಾದುದರಿಂದ ಯೋಗಾನಂದನಿಗೆ ಗಿರಿಯ ದರ್ಶನವುಕೂಡ ದಿನಕ್ಕೊಂದುಬಾರಿಗೆ ಹೆಚ್ಚಾಗಿ ಆಗುತ್ತಿರಲಿಲ್ಲ. ಇಂದು ರಿಜಿಸ್ಟರಾಗಿ ಬಂದ ಕಾಗದಗಳನ್ನು ಕೈಯಲ್ಲಿ ಹಿಡಿದುಕೊಂಡು ಯೋಗಾನಂದನು ಕಿರುಮನೆಯೊಳಗೆ ಬಂದನು ಗಿರಿಜೆಯು ಕುಳಿತಿದ್ದವಳು ಹಾಗೆಯೇ ಕಣ್ಣುಮುಚ್ಚಿಕೊಂಡು ಧ್ಯಾನಮಗ್ನಳಾಗಿದ್ದುದನ್ನು ನೋಡಿ ಚಕಿತನಾಗಿ, ಕಿರುಮನೆಯ ಬಾಗಿಲನ್ನು ಮುಂದಕ್ಕೆಹಾಕಿ ಗಿರಿಯಬಳಿಗೆಬಂದು, ಮೆಲ್ಲನೊಮ್ಮೆ ತನ್ನ ಬಲಗಾಲಿನಿಂದ ಅವಳ ತೊಡೆಯನ್ನು ತುಳಿದನು. ಗಿರಿಜೆಗೆ ಧ್ಯಾನಭಂಗವಾಗಿ ' ಯಾರದು ' ಎನ್ನುತ್ತ ಗಾಬರಿಯಿಂದ ಕಣ್ದೆರೆದು ನೋಡಿದಳು ಪತಿಯು ಇದಿರಿಗೆ ಕಾಗದಗಳನ್ನು ಹಿಡಿದುಕೊಂಡು ತನ್ನನ್ನೇ ನೋಡುತ್ತಿದ್ದುದನ್ನು ನೋಡಿ ಏಳಹೋದಳು. ಆದರೆ ಆಗಲಿಲ್ಲ, ಕಣ್ಗತ್ತಲೆ ಬಂದಂತಾಗಿ ಗೋಡೆಯನ್ನು ನೆಮ್ಮಿ ಕುಳಿತುಬಿಟ್ಟಳು. ಯೋಗಾನಂದನು, ಪತ್ನಿಯು ಹೀಗೆ ಕುಳಿತು

ದನ್ನು ನೋಡಿ ಗಾಬರಿಯಾಗಿ ಅವಳಬಳಿ ಕುಳಿತು ಕೈಹಿಡಿದು ಕೇಳಿದನು. ' ಯಾಕೆ? ಏನಾಯ್ತು ?

ಗಿರಿ—ಏನೂ ಆಗಿಲ್ಲ, ಬಹಳ ಹೊತ್ತಿನಿಂದ ಕಣ್ಣು ಮುಚ್ಚಿ ಕುಳಿತಿದ್ದೆ, ನೀವು ಬಂದಾಗ ಬಗ್ಗನೆ ಏಳಹೋದೆ; ಸ್ವಲ್ಪ ಕಣ್ಕತ್ತಲೆ ಬಂದಂತಾಯ್ತು, ಅಷ್ಟೆ.

ಯೋಗಾ—ನಾನು ಬಂದರೆ ಗಾಬರಿಯಾಕೆ !

ಗಿರಿ—ಎಂದೂ ಬಾರದಿದ್ದವರು, ಇಂದು, ಇಷ್ಟು ಹೊತ್ತಿನಲ್ಲಿ ಬಂದರೆ, ಸಂಗತಿಯೇನೋ ಇರಬೇಕೆಂದು !

ಯೋಗಾ—ನಿನ್ನ ಅಕ್ಕನೂ ತಮ್ಮನೂ ನಿನಗೆ ಕಾಗದ ಬರೆದಿದ್ದಾರೆ. ರಿಜಿಸ್ಟರಾಗಿ ಬಂದಿವೆ.

ಗಿರಿ—ರಿಜಿಸ್ಟರಾಗಿ ಬಂದಿವೆಯೇ ? ಯಾಕೆ ?

ಯೋಗಾ—ಯಾಕೆಂದರೆ, ನಿನ್ನ ಕ್ಷೇಮಸಮಾಚಾರ ತಿಳಿಯಲಿಕ್ಕೂ ಕಾಗದ ಮತ್ತಾರ ಕೈಗೂ ಹೋಗದೆ ನಿನಗೇ ಸೇರಲಿಕ್ಕೂ ಮಾಡಿರಬಹುದು. (ಎಂದು ಕಾಗದಗಳನ್ನು ಕೈಗೆ ಕೊಟ್ಟನು.) ಗಿರಿಜೆಯು ಕಾಗದಗಳನ್ನು ಒಡೆದು ನೋಡಿದಳು : ಮತ್ತಾವ ವಿಶೇಷಸಂಗತಿಯೂ ಇರಲಿಲ್ಲ. ತಮ್ಮ ಕಾಗದಗಳಿಗೆ ಇಲ್ಲಿಂದ ಉತ್ತರವಿಲ್ಲವೆಂದೂ ಇಲ್ಲಿಯ ಕುಶಲವಾರ್ತೆಯನ್ನು ತಿಳಿದಲ್ಲದೆ ಮನಸ್ಸಮಾಧಾನವಿಲ್ಲವೆಂದೂ ಕಾಗದವು ಸರಿಯಾಗಿ ಕೈಸೇರಲೆಂದು ರಿಜಿಸ್ಟರ್ ಮಾಡಲ್ಪಟ್ಟಿತೆಂದೂ ಬರೆಯಲ್ಪಟ್ಟಿದ್ದಿತು. ಗಿರಿಜೆಯು ತಾನು ಓದಿದ ಬಳಿಕ ಕಾಗದಗಳನ್ನು ಪತಿಯ ಮುಂದಿಟ್ಟಳೇ ಹೊರತು ಯಾವ ಮಾತನ್ನೂ ಆಡಲಿಲ್ಲ.

ಯೋಗಾ—ಮಾತಾಡಲೊಲ್ಲೆ ಯಾಕೆ ? ಸಿಟ್ಟು ಬಂದಿದೆಯೇನು ?

ಗಿರಿ—' ಬಡವನ ಸಿಟ್ಟು-ದವಡೆಗೆ ಪೆಟ್ಟು ' ನಾನಾರಲ್ಲಿ ಸಿಟ್ಟು ಮಾಡಲಿ ? ನನ್ನ ಸಿಟ್ಟನ್ನು ಕೇಳುವರಾರು ?

ಯೋಗಾ—ಮತ್ತಾರಲ್ಲಿ ಮಾಡುತ್ತೀ ? ಹೊಣೆಗಾರರಾದವರಲ್ಲಿ ಮಾಡುತ್ತೀಯಷ್ಟೆ !

ಗಿರಿ—(ನೆಲವನ್ನೇ ನೋಡುತ್ತ) ರಾಧಾಮಾಧವನ ಪಾದಸಾಕ್ಷಿಯಾಗಿಯೂ ನನಗೆ ಯಾರಮೇಲೆಯೂ ಸಿಟ್ಟಾಗಿಲ್ಲ, ಕಡೆಗೆ ನನ್ನ ವಿಷಯವಾಗಿಯೂ ನನಗೆ ಸಿಟ್ಟಿಲ್ಲ.

ಯೋಗಾ—ಎಂದಮೇಲೆ ಇಷ್ಟೊಂದು ಮೌನಕ್ಕೂ ಅಂತರ್ಗೃಹವಾಸಕ್ಕೂ ಕಾರಣವೇನು ?

ಗಿರಿ—ಅಪ್ರಕೃತವಾಗಿ ಹೊರಗೆ ಬಂದು ಮಾತನಾಡಿ ಲಜ್ಜಾಹೀನೆಯೆನ್ನಿಸಲಾರದೆ ?

ಯೋಗಾ—ಅಪ್ರಕೃತವೆಂದು ಹೊರಗೆ ಬಾರದೆ, ಒಳಗೇ ಕುಳಿತಿದ್ದರೆ ಪ್ರಕೃತಿಗೆ ಹಿತವಾದೀತೆ ? ಮನೆಯಲ್ಲಿ ತಿರುಗಾಡಲಿಕ್ಕೂ ನಿನಗೆ ಅವಕಾಶವಿಲ್ಲವೆ ?

ಗಿರಿ—(ಮೆಲ್ಲನೆ) ಉಪಯೋಗವಿಲ್ಲದ ಪ್ರಶ್ನೆಗಳಿಂದ ವೇಳೆಗಳೆವುದೊಂದು, ಮನೆಯವರ ಅಸಮಾಧಾನಕ್ಕೆ ಎಡೆಗೊಡುವುದೊಂದು, ಇದೆಲ್ಲಾ ಯಾಕೆ? ಪ್ರಕೃತಿಯ ಹಿತಾಹಿತಗಳನ್ನು ವಿಚಾರಿಸಿ, ಇನ್ನು ಮಾಡುವುದಾದರೂ ಏನು? ಈವರೆಗೂ ಇದ್ದಂತೆ ಸ್ವಸ್ಥವಾಗಿದ್ದರಾಯಿತು !

ಯೋಗಾನಂದನು ಪತ್ನಿಯ ಉದಾಸೀನವಾಕ್ಯಗಳನ್ನೂ ಅವಳಾಮುಖದಲ್ಲಿ ಕಾಣುತ್ತಿದ್ದ ಜಿಗುಪ್ಸೆಯನ್ನೂ ನೋಡಿ ಖಿನ್ನನಾಗಿ ಕೇಳಿದನು. ಗಿರಿ, ನಿನಗಿಲ್ಲಿ ಸುಖಸಂತೋಷವಿಷ್ಟೂ ಇಲ್ಲವೆಂಬುದು ನಿನ್ನ ಈಗಿನ ರೀತಿಯಿಂದಲೇ ಕಾಣಬಹುದಾಗಿದೆ. ಹೀಗಾಗಬಹುದೆಂದು ತರ್ಕಿಸಿಯೇ ನಾನು, ನಿನ್ನನ್ನು ಕರೆತಂದಿಲ್ಲಿ ನಿರ್ಬಂಧದಲ್ಲಿರಿಸಿ ಕೊರಗಿಸಲಾರದೆ ಸುಮ್ಮನಿದ್ದೆ. ಈಗ ನೀನಾಗಿಬಂದು ಉರಲಿಗೆ ಸಿಕ್ಕುಬಿದ್ದಂತಾಯ್ತು ! ಈಗ ನಾನು ಮಾಡುವುದಾದರೂ ಏನಿದೆ ?

ಗಿರಿ—(ನಸುನಕ್ಕು) ನನಗೆ ನಿರ್ಬಂಧವೆಂದಾಗಲೀ ' ಉರಲಿಗೆ ' ಸಿಕ್ಕಿದೆನೆಂಬ ಕಷ್ಟಬೋಧೆಯಾಗಲೀ ಮತ್ತು ಇತರ ಕಷ್ಟಕ್ಲೇಶಗಳಾಗಲೀ ತಿಳಿಯವು ! ತಿಂದುಕೊಂಡು, ಮಲಗಿ, ಕಾಲಕಳೆವ ನನಗೆ ಯಾವ ಕ್ಲೇಶವುಂಟು ? ವೃಥಾ ಇಲ್ಲದೊಂದು ಅರ್ಥ ಮಾಡಿಕೊಂಡು ಮರುಗುವುದಾದರೂ ಯಾಕೆ ? ನಾನು ಬಂದುದು ನಿಮಗೆ ಅತೃಪ್ತಿಕರವಾಗಿರಬಹುದು ! ಅಷ್ಟುಹೊರತು, ನನಗೇನೂ ಅದರಿಂದ ಅಸುಖವಿಲ್ಲ.

ಯೋಗಾ—ಗಿರಿ, ನನ್ನಿಂದ, ಯಾರಮನಸ್ಸಿಗೂ ಕ್ಲೇಶವಾಗುವಂತೆ ಮಾಡುವದಾಗದು. ಮತ್ತು ನನ್ನ ಸ್ವಭಾವವೂ ವಿಲಕ್ಷಣವಾದುದು ! ದಾಕ್ಷಿಣ್ಯವೂ, ಲಜ್ಜಾಶೀಲವೂ ನನ್ನನ್ನು ಬಲವಾಗಿ ಆಕ್ರಮಿಸಿಕೊಂಡುಬಿಟ್ಟಿವೆ ! ಇಷ್ಟುಹೊರತು ನೀನಿಲ್ಲಿಗೆ ಬಂದುದು ನನಗೆ ಅತೃಪ್ತಿಕರವಾಗಿ ಕಂಡುಬಂದಿಲ್ಲ.

ಗಿರಿ:—ಸಂತೋಷ ; ಆದರೆ ತಮ್ಮ ಪ್ರಕೃತಿಹೇಗಿದೆ? ನಾನು ಬಂದೀಚೆಗೆ ಇಷ್ಟೇಕೆ ಸೊರಗಿರುವುದು ? ಮುಖದಲ್ಲಿ ಉತ್ಸಾಹದ ಕಳೆಯಾದರೂ ಇಲ್ಲವಾಗಿರುವುದೇಕೆ ? ಇದೆಲ್ಲಾ ಯಾತರಿಂದ ?

ಯೋಗಾ :—(ಎರಡು ಕೈಗಳಿಂದಲೂ ತನ್ನ ಮುಖವನ್ನೊಮ್ಮೆ ಒರಸಿ ಕೊಂಡು, ತಲೆಯೆತ್ತಿ) 'ಏನೆಂದೆ ? ಸೊರಗಿರುವೆನೆಂದೆಯಾ ? ಇದ್ದರೂ ಇರ ಬಹುದು. ಈಸಾರೆ ನಾನು ನಿನ್ನ ತವರ್ಮನೆಯವರಿಂದ ಬೀಳ್ಕೊಂಡು ಬಂದುದು ಮೊದಲು ಮನಸ್ಸು ಶಾಂತವಿಲ್ಲ. ಒಂದೆರಡು ನಿಮಿಷವಾದರೂ ಮನಸ್ಸಿಗೆ ವಿಚಾರಗಳು ಹತ್ತಿಲ್ಲವೆಂಬಂತಿಲ್ಲ. ಒಂದಕ್ಕೊಂದಕ್ಕೆ ಗಂಟುಹಾಕಿದಂತೆ ಹಲವು ವಿಚಾರಗಳು ಹತ್ತಿ, ಅದರಿಂದ ತಲೆಕಾದು, ಮೈಯೊಳಗೆ ಕಾವು ಹೆಚ್ಚುತ್ತಲಿದೆ. ಅದರ ದೆಸೆಯಿಂದ ಊಟ ನಿದ್ರೆಗಳಲ್ಲಿಯೂ ಸ್ವಲ್ಪ ಬೇಸರಿಕೆಯೇ ಕಾಣುತ್ತಿದೆ! ಗಿರಿ, ನನ್ನ ವಿಚಾರವನ್ನೇನೋ ಕೇಳಿದೆ ; ಸರಿ, ನಿನ್ನ ಪ್ರಕೃತಿಹೇಗಿದೆ ? ಒಂದ ಇಪ್ಪತ್ತು ದಿನಗಳೊಳಗೇ ಇಷ್ಟು ಕೃಶವಾಗಿ ಹೋಗಿರಲು ಕಾರಣವೇನು ? ಮತ್ತೆ ಜ್ವರವೇನಾದರೂ ಬರುತ್ತಿದೆಯೇ ?

ಗಿರಿ :—ಏನೂ ಆಗಿಲ್ಲ, ಎಲ್ಲಾ ನೆಟ್ಟಗಿದೆ. ಜ್ವರವೇನೂ ಇಲ್ಲ.

ಯೋಗಾ :—ಮತ್ತೆ ? ಮುಖ ಬೆಳ್ಳಗಾಗಿಹೋಗಿದೆ. ತುಟಿ ನಾಲಿಗೆ ಒಣಗುತ್ತಿವೆ. ರಕ್ತಕಲೆಯಿಷ್ಟೂ ಇಲ್ಲ. ಗಿರಿ, ನೀನಿಲ್ಲಿಗೆ ಬಂದುದು ಮೊದಲು, ಉತ್ಸಾಹವನ್ನೇ ಕಳಕೊಂಡಂತಿದ್ದೀಯಾಕೆ ? ರಾತ್ರಿಯ ಊಟವನ್ನೂ ಬಿಟ್ಟಿರುವೆ ಯಂತೆ! ಮಧ್ಯಾಹ್ನದ ಊಟವೊಂದು ಹೊರತು ಮತ್ತಾವ ಆಹಾರ ಪಾನೀ ಯಗಳನ್ನೂ ತೆಗೆದುಕೊಳ್ಳಲೊಲ್ಲೆಯಂತೆ! ಹೀಗೆಲ್ಲಾ ಮಾಡುತ್ತೀಯಾಕೆ?

ಗಿರಿ :—ಯಾರೆಂದವರು ? ಮಧ್ಯಾಹ್ನದ ಊಟವೇ ಹೊತ್ತುಮೀರಿ ಆಗುವುದರಿಂದಲೂ ಪಚನಶಕ್ತಿಯಿಲ್ಲದ್ದರಿಂದಲೂ ಮಾಡಲಿಕ್ಕೆ ಕೆಲಸವೇನೂ ಇಲ್ಲದೆ ಸುಮ್ಮನೆ ಕೈಕಾಲು ಕಟ್ಟಿಕೊಂಡು ಕುಳಿತಿರುವುದರಿಂದಲೂ ರಾತ್ರಿ ಯೂಟ ಬೇಕಾಗುವುದಿಲ್ಲ. ಆಹಾರ ಪಾನೀಯಗಳೆಂದರೆ, ಒಳಗೆ ಮಾಡಿದ್ದುದನ್ನು, ಹಿರಿಯರು ಕೊಟ್ಟುದಾವುದನ್ನೂ ನಾನು ಒಲ್ಲೆನೆಂದಿಲ್ಲ. ನನಗದು ಬೇಕಾಗಿಲ್ಲ ದಿದ್ದರೂ ಸ್ವಲ್ಪವಾದರೂ ತೆಗೆದುಕೊಳ್ಳುತ್ತಲೇ ಇದ್ದೇನೆ.

ಯೋಗಾ :—ನಿನಗೆ ಕಾಫೀ ಚಹಾ ಕುಡಿಯುವ ಅಭ್ಯಾಸವಿದ್ದು, ನಾವು ಕೊಟ್ಟುದನ್ನು ತೆಗೆದುಕೊಳ್ಳಲೊಲ್ಲೆಯಾಕೆ ?

ಗಿರಿ :—(ನಸುನಕ್ಕು) ನಾನು ಕಾಲುಚಾಚಿ ಕುಳಿತುಕೊಂಡು, ನೀವು ಮಾಡಿಕೊಡುವುದನ್ನು ತೆಗೆದುಕೊಳ್ಳುವುದಕ್ಕೆ ನನ್ನಿಂದಾಗುವುದಿಲ್ಲ. ಅಲ್ಲದೆ, ಈಗ ನಾನೇನೂ ಸಣ್ಣಹುಡುಗಿಯಲ್ಲ. ನನ್ನ ಕಾಲನೆಲ್ಲಾ ನುಂಗಿಯುತ್ತ

ಬರುತ್ತಲಿದೆ. ಶುಚಿ ರುಚಿಗಳನ್ನೂ ನೋಡಿಕೊಳ್ಳಬೇಕು, ಆಚಾರ ವಿಚಾರ ಗಳನ್ನೂ ಸರಿಯಾಗಿರಿಸಿಕೊಳ್ಳಬೇಕು. ಹುಡುಗರೆಲ್ಲಾ ಸೇರಿ, ಆ ಕೈ-ಈ ಕೈ-ಯೆನ್ನದೆ ಮಾಡಿದ್ದನ್ನೆಲ್ಲಾ ನಾನು ತೆಗೆದುಕೊಳ್ಳುವುದೆಂದರೆ ನಗೆಗೇಡೇ ಸರಿ! ಇದರ ಮೇಲೆ ಈ ಮನೆಯಲ್ಲಿ ನಿಮ್ಮವರಿಗಾರಿಗೂ ಅದರ ಅಭ್ಯಾಸವಿಲ್ಲ. ನಾನು ತೆಗೆದುಕೊಂಡರೆ ಜನರ ಆಡಿಕೆಯಾಗುತ್ತದೆ.

ಯೋಗಾ :—ಆಡುವರು ಆಡಿಕೊಂಡುಹೋಗಲಿ. ಒಂದು ಕೆಲಸಮಾಡು? ನಾಳಿನಿಂದ, ಕಾಫೀ, ಚಹಾ, ಮಾಡುವಕೆಲಸವನ್ನು ನಿನಗೇ ವಹಿಸಿಬಿಡುತ್ತೇವೆ. ನಮಗೂ ಮಾಡಿಕೊಟ್ಟು ನೀನೂ ತೆಗೆದುಕೊಂಡರೆ ಎರಡೂ ಕೆಲಸವಾಗುತ್ತದೆ.

ಗಿರಿ :—ಅತ್ತೆಯವರು ಒಪ್ಪಿದರೆ ಆಗಲಿ, ಆದರೆ ಅಕ್ಕನವರಿಗೆ,—

ಯೋಗಾ :—ಎಲ್ಲರವಾತನ್ನೂ ತೆಗೆದುಕೊಂಡು ಮಾಡುವುದೇನು? ನಿನ್ನಅತ್ತೆಯಕಡೆಯಿಂದಲೇ ನಿನಗೆ ಕೆಲಸವನ್ನು ಗೊತ್ತುಮಾಡುತ್ತೇನೆ!

ಗಿರಿ :—(ತಲೆಯೆತ್ತಿ ಕುತೂಹಲದಿಂದ) ಇದೇನಿಂದು ಇಷ್ಟು ಅನುಗ್ರಹ?

ಯೋಗ :—ಆಗ್ರಹವುಂಟಾಗಿದ್ದರಲ್ಲವೆ? ಅನುಗ್ರಹವೆಂಬುದು, ಈಗಳಿನದಲ್ಲ. ಅದು ಎಂದಿಗೂ ಒಂದೇ ಬಗೆಯಾಗಿಯೇ ಇರುವದು!

ಗಿರಿ :—ಇಷ್ಟುದಿನಗಳವರೆಗೆ ಪರೀಕ್ಷಿಸುತ್ತಿದ್ದಿರೇನು?

ಯೋಗಾ :—ಮೊದಲೇ ಹೇಳಿದ್ದೇನಲ್ಲಾ; ಲಜ್ಜಾ (ಶೀಲ) ಸ್ವಭಾವವೆಂದು! ಆದರೆ ಇನ್ನೂ ಹಾಗಿರಲು ಶಕ್ಯವಿಲ್ಲ. ಇಷ್ಟರವರೆಗೆ ಉಪೇಕ್ಷೆಯನ್ನು ತೋರಿ, ಸುಮ್ಮನಿದ್ದುದಕ್ಕೆ ಕ್ಷಮಿಸಿಬಿಡು!

ಗಿರಿ :—(ನಸುನಗೆಯಿಂದ) ಇದೊಂದು ಚನ್ನಾಗಿಬರುತ್ತದೆ! ಹೋಗಲಿ, ಊರಿಗೆ ಶೀನಪ್ಪನಿಗೆ ಕಾಗದವನ್ನು ಬರೆಯಲಿಕ್ಕಾದೀತೋ-ಇಲ್ಲವೋ?

ಯೋಗಾ :—(ಗಿರಿಜೆಯ ಬೆನ್ನುತಟ್ಟಿ) ಇನ್ನುಮೇಲೆ ನೋಡಿಯಾದರೂ ನೋಡು. ಸಿಟ್ಟು ಮಾಡಬೇಡ. ರಾತ್ರಿಗೆ ನಿನ್ನ ಸಮಕ್ಷಮದಲ್ಲಿಯೇ ಕುಳಿತು ಬರೆಯುತ್ತೇನೆ. ಈಗಳಂತೂ ಹೊತ್ತಾಯ್ತಲ್ಲ?

ಗಿರಿ :—ಆಯಿತು. ನಾನು ಈಗಲೇ ಬರೆಯಬೇಕೆಂದು ಹೇಳಲಿಲ್ಲವಷ್ಟೆ?

ಯೋಗಾ :—ಗಿರಿ, ಇನ್ನುಮೇಲೆ ನೋಡಿಕೊ, ಹೇಳಿರುತ್ತೇನೆ. ನಿನ್ನ ವಿದ್ಯಾ-ಬುದ್ಧಿ, ಊಹಾಪೋಹಗಳನ್ನೂ, ನಿನ್ನ ಶಕ್ತಿಸಾಮರ್ಥ್ಯಗಳನ್ನೂ ಹೀಗೆ ಕುಳಿತು ವ್ಯರ್ಥಮಾಡಿಕೊಳ್ಳಲು, ನಾನಂತೂ ಬಿಡಲಿಕ್ಕಿಲ್ಲ. ಅದೆಲ್ಲವನ್ನೂ ನೀನು

ಸಮಯವರಿತು ಉಪಯೋಗಿಸಲಿಕ್ಕೂ, ನನಗೆ ಒಳ್ಳೇ ಸಹಾಯಕಳಾಗಿರಲಿಕ್ಕೂ ಜಾಗ್ರತಳಾಗಿರಬೇಕು ! ಇನ್ನು ಸಾಕು.

ಗಿರಿಯ ಸಮ್ಮತಿಪಡೆದು ಯೋಗಾನಂದನು ಎದ್ದು ಹೊರಟುಹೋದನು. ಗಿರಿಜೆಯೂ ರಾಧಾಮಾಧವನನ್ನು ಕೊಂಡಾಡುತ್ತ ಎದ್ದಳು.

---

iii

ಯೋಗಾನಂದನು ಹೇಳಿದಂತೆಯೇ ಗಿರಿಜಾಬಾಯಿಗೆ ಅತ್ತೆಯ ಅಪ್ಪಣೆಯಾಗಿ ಕಾಫೀ-ತಿಂಡಿಗಳನ್ನು ಉಪಹಾರ (ಪಾನೀಯ) ಮಾಡುವ ಕೆಲಸವೂ ಇತರ ಸಣ್ಣ ಪುಟ್ಟ ಕೆಲಸಗಳೂ ವಹಿಸಲ್ಪಟ್ಟವು. ಗಿರಿಜಾಬಾಯಿಯ ಮನಸ್ಸಿಗೆ ಈಗ ಉತ್ಸಾಹವುಂಟಾಯಿತು. ಸಂತೋಷದಿಂದ ತನ್ನ ಪಾಲಿಗೆ ಬಂದ ಕೆಲಸವನ್ನು ಮಾಡಲು ಒಪ್ಪಿಕೊಂಡಳು. ಮರುದಿನದಿಂದ ತನ್ನ ಅಕ್ಕನು ಏಳುವುದಕ್ಕೆ ಮೊದಲೇ ಎದ್ದು, ಗಂಡಸರು ಕುಳಿತು, ಉಪಾಹಾರ ಪಾನೀಯಗಳನ್ನು ತೆಗೆದುಕೊಳ್ಳುವ ಸ್ಥಳವನ್ನು ಗುಡಿಸಿ ಸಾರಿಸಿ, ಚಾಪೆಯನ್ನು ಹಾಸಿಟ್ಟು, ಕುಡಿಯುವ ಪಾತ್ರೆಗಳನ್ನು ತೊಳೆದಿರಿಸಿ, ಆಬಳಿಕ, ಉಪಾಹಾರವನ್ನೂ ಪಾನೀಯ (ಕಾಫೀ) ವನ್ನೂ ಸಿದ್ಧಪಡಿಸುತ್ತಿದ್ದಳು

ಗಂಡಸರು-ಹುಡುಗರೆಲ್ಲರೂ ಬಂದು ಕಾಫೀ ತಿಂಡಿಗಳನ್ನು ತೆಗೆದುಕೊಂಡ ಮೇಲೆ ಗಿರಿಜೆಯೂ ಪತಿಯ ಒತ್ತಾಯಕ್ಕೊಳಪಟ್ಟು ತಾನೂ ಕಾಫಿಯನ್ನು ತೆಗೆದುಕೊಳ್ಳುತ್ತಿದ್ದಳು. ಆಬಳಿಕ ಪಾತ್ರೆಗಳನ್ನೆಲ್ಲಾ ಮತ್ತೆ ತೊಳೆದಿರಿಸಿಬಂದು ಮೈತೊಳೆದುಕೊಳ್ಳುವವರೆಗೆ ತನ್ನಿಂದಾದ ಸಣ್ಣ ಪುಟ್ಟ ಕೆಲಸಗಳನ್ನುಮಾಡುವಳು. ಈಕ್ರಮದಲ್ಲಿ ನಾಲ್ಕಾರುದಿನಗಳು ನಡೆದವು. ಇವಳು ಕೆಲಸಮಾಡುವಾಗ ತೋರಿಸುತ್ತಿದ್ದ ಚಟುವಟಿಕೆ, ಕೆಲಸದಲ್ಲಿ ಆಸಕ್ತಿ, ಉತ್ಸಾಹಗಳನ್ನು ನೋಡಿಯೂ, ಪದಾರ್ಥಗಳ ಮಾಧುರ್ಯ ಶುಚಿತ್ವಗಳ ವರ್ಣನವನ್ನು ಕೇಳಿಯೂ ಅತ್ತೆಗೆ ಆನಂದವಾಯಿತು. ಮನೆಯ ಗಂಡಸರು ಇವಳ ಕೈಯಿಂದ ಭಕ್ಷ್ಯಗಳನ್ನು ಮಾಡಿಸಿ ತಿನ್ನುತ್ತ ಅದನ್ನು ಬಗೆಬಗೆಯಾಗಿ ವರ್ಣಿಸುತ್ತಿದ್ದುದನ್ನು ನೋಡಿ ಮತ್ತೂ ಮೆಚ್ಚಿಕೊಂಡಳು. ಇಷ್ಟೇ ಅಲ್ಲ, ಯೋಗಾನಂದನೇ ಪತ್ನಿಯ ವಿದ್ಯಾಬುದ್ಧಿ, ಗುರುದೈವಭಕ್ತಿ ಮೊದಲಾದ ಗುಣಗಳನ್ನು ವಿವರಿಸಿದುದರಿಂದ ಮಗನ ಮಾತಿಗೆ ಒಲಿದ ತಾಯಿ, ದಿನವೂ ಊಟವಾದ ಬಳಿಕ, ಗಿರಿಜೆಯನ್ನು ಕರೆದು ಕುಳ್ಳಿರಿಸಿಕೊಂಡು, ದೇವರನಾಮಗಳನ್ನು ಹೇಳಿಸುವುದು, ಭಕ್ತರ ಕಥೆಗಳನ್ನೂ ಭಗವದ್ಭಜನ ಗ್ರಂಥ

ಗಳನ್ನೂ ಓದಿಸುವುದು, ಇತರ ಲೋಕರೂಢಿಯ ಮಾತುಕಥೆಗಳನ್ನಾಡುವುದು-ಈಬಗೆಯಲ್ಲಿ ಸೊಸೆಗೆ ಹೊಸಹುರುಪನ್ನುಂಟುಮಾಡುತ್ತ ಬಂದಳು. ಗಿರಿಜೆಗೆ ಅತ್ತೆಯವಿಷಯಕ್ಕಿದ್ದ ಭಯ ಗೌರವಗಳೊಡನೆ ಭಕ್ತಿರೂಪವಾದ ಆಂತರಿಕ ಸ್ನೇಹವೂ ಉತ್ಪನ್ನವಾಯಿತು. ತನ್ನ ಸೇವೆ, ಸದಾಚರಣ, ಮೃದುಭಾಷಣ, ಜಾಗರೂಕತೆಗಳಿಂದ ಬರುತ ಬರುತ ಒಂದೆರಡುತಿಂಗಳಲ್ಲಿ, ಪತಿಯ ವಿಚಾರವಿರಲಿ, ಅತ್ತೆಯಮನಸ್ಸಿಗೂ ಮೈದುನ ಮೊದಲಾದವರ ಮನಸ್ಸಿಗೂ ಅಚ್ಚುಮೆಚ್ಚಿಗೆಗೂ, ಅಕ್ಕರೆಕಕ್ಕುಲಿಕೆಗೂ ತಕ್ಕವಳಾಗಿ ಕಂಡಳು.

ದಿನದಿನಕ್ಕೂ ಯೋಗಾನಂದನ ಆಪ್ತಮಿತ್ರರೂ ಮಿತ್ರರಮನೆಯ ಹೆಂಗಸರೂ ಗಿರಿಜೆಯ ಪರಿಚಯಮಾಡಿಕೊಳ್ಳುತ್ತ ಬಂದರು. ಯೋಗಾನಂದನಿಗೂ ಈಗ ತನ್ನ ಲೇಖನ-ವಾಚನ, ಸಮಾಲೋಚನ, ಸಮಸ್ಯಾಪೂರಣ ಮೊದಲಾದ ಕಾರ್ಯಗಳಲ್ಲಿಯೂ ಗಿರಿಜೆಯ ಸಮಯೋಚಿತ, ಯಥಾಮತಿ, ಶಕ್ತ್ಯನುಸಾರ ಸಹಾಯವು ದೊರೆಯುವುದಾಯ್ತು. ಗಿರಿಜೆಯ ಸಹಚರ್ಯೆಯಿಂದಲೂ ಸಾದರೋಪಚಾರಗಳಿಂದಲೂ ಮಾರ್ಮಿಕಭಾಷಣಗಳಿಂದಲೂ ಸಹಾಸ್ಯವಾಗಿ ಸೂಚಿಸುತ್ತಿದ್ದ ಪ್ರೋತ್ಸಾಹದಿಂದಲೂ ಯೋಗಾನಂದನು ಸುಖಿಯೂ ಸರಸಿಯೂ ಉತ್ಸಾಹಿಯೂ ಉದ್ಯಮಿಯೂ ಆದನು. ಮೊದಲು ಆತನ ಮುಖದಲ್ಲಿ ಎತ್ತಿಕಾಣುತ್ತಲಿದ್ದ ಉದಾಸೀನತೆಯಾಗಲೀ ಉದ್ವಿಗ್ನತೆಯಾಗಲೀ ಕಾಣದಾಯ್ತು. ತನ್ನತಾಯಿ ಸಂತುಷ್ಟಳಾಗಿರುವುದನ್ನೂ ತಮ್ಮನು ಸಮಾಧಾನಗೊಂಡಿರುವುದನ್ನೂ ನೋಡಿ ಆನಂದಪಟ್ಟನು. ಆತನ ಶಾರೀರಿಕಸ್ಥಿತಿಯೂ ಸುಧಾರಿತವಾಯಿತು. ಯೋಗಾನಂದನ ಪರಿವರ್ತನವನ್ನು ನೋಡಿ ಮನೆಯವರಿಗೂ ಮಿತ್ರರಿಗೂ ಸಹ ಸಂತೋಷವಾಯ್ತು. ಆತನ ಅತ್ಯಂತ ಆಪ್ತಮಿತ್ರರಾದವರು ಆತನ ಬೆನ್ನುತಟ್ಟುತ್ತ-'ಏನಯ್ಯಾ! ಯಾರ ಔಷಧೋಪಚಾರಗಳು ನಡೆದಿವೆ? ಇಷ್ಟು ಜಾಗ್ರತೆಯಾಗಿ ಸುಧಾರಿಸಿದ್ದೀಯಲ್ಲ!' ಎಂದು ಚೇಷ್ಟೆಮಾಡುತ್ತ ಬಂದರು. ಯೋಗಾನಂದನ ಕೂಡ ಅವರಮಾತುಗಳಿಗೆ ಆಗ್ರಹಗೊಳ್ಳದೆ ಸಂತೋಷವಾಗಿಯೇ 'ದೈವೀಶಕ್ತಿಸಂಪನ್ನರಾದ ವೈದ್ಯರೊಬ್ಬರ ಕಡೆಯಿಂದ ಔಷಧೋಪಚಾರಗಳನ್ನು ಹೊಂದುತ್ತಲಿದ್ದೇನೆ. ಅದರ ಪ್ರಭಾವದಿಂದ ಇಷ್ಟು ಜಾಗ್ರತೆ ಸುಧಾರಿಸಿದ್ದೇನೆ! ಹೀಗೆ ಹೇಳುತ್ತಲಿದ್ದನು. ಗಿರಿಜೆಗೂ ಪತಿಯ ಆನಂದವೃತ್ತಿಯು ಅತ್ಯಂತ ಸುಖದಾಯಕವಾಯ್ತು. ಆದರೆ, ಇದೇ ಸುಖವೇ ಎಂದಿಗೂ ಇರಬೇಕಾದುದು ಪ್ರಾರ್ಥನೀಯವು!

***

## iv

ಗಿರಿಜಾ ಯೋಗಾನಂದರ ದಾಂಪತ್ಯಾನುಕೂಲತೆಯನ್ನು ನೋಡಿ, ಬಂಧುಮಿತ್ರರು ಆನಂದಪಡುತ್ತಿದ್ದರೂ ದೈವಕ್ಕೆ ಅದು ಸಹನೆಯಾಗಲಿಲ್ಲ ! ಗುಣಾಢ್ಯನೂ, ದಾಕ್ಷಿಣ್ಯಸ್ವಭಾವದವನೂ, ಧರ್ಮಾತ್ಮನೂ ಆದ ಯೋಗಾನಂದನು ತನ್ನಿಂದ ಯಾರಿಗೂ (ಅಸಮಾಧಾನವಾಗುವಂಥ ಕೆಲಸವು) ಸ್ವಲ್ಪವಾದರೂ ನಡೆಯದಂತೆ ಜಾಗರೂಕನಾಗಿಯೇ ನಡೆಯುತ್ತಿದ್ದರೂ ದೈವವಿಲಾಸದಿಂದ ಆತನ ಆತ್ಮೀಯರಿಗೆ ಅಕಾರಣವಾದ ಅಸಂತೋಷವುಂಟಾಗದಿರಲಿಲ್ಲ !

ಗಿರಿಜೆಯ ಆಗಮನವಾರ್ತೆ, ಕಿವಿಗೆ ಬಿದ್ದೊಡನೆಯೇ ಸತ್ಯಭಾಮೆಯ ಹೃದಯದಲ್ಲಿ ಅಸಹನೆಯ ಬೀಜವು ಅಂಕುರವಾಯಿತು. ಗಿರಿಜೆಯ ಪ್ರಶಸ್ತಿ ಹೆಚ್ಚಿದಂತೆಲ್ಲಾ ಅದೂ ಹೆಚ್ಚುತ್ತ ಬಂದಿತು. ಮೊದಲು ತನ್ನ ವಿಷಯದಲ್ಲಿಯೂ, ಮನೆಯವರ ವಿಷಯದಲ್ಲಿಯೂ ಉದಾಸೀನದಿಂದ ವರ್ತಿಸುತ್ತಿದ್ದ ಪತಿಯು ಈಗ ಗಿರಿಜೆಯಲ್ಲಿ ತೋರುತ್ತಲಿದ್ದ ಆದರವನ್ನೂ-ಅವಳು ಬಂದ ಬಳಿಕ ಉಂಟಾದ ಆತನ ಪರಿವರ್ತನವನ್ನೂ ನೋಡಿ ಅಸಹನೆಯು ಈರ್ಷ್ಯೆಯಾಗಿ ತಿರುಗಿತು.

ಮೌಢ್ಯಾಚಾರತತ್ಪರಳಾದ ಸತ್ಯಭಾಮೆಗೆ ಗಿರಿಜೆಯ ವಿಷಯದಲ್ಲಿ ಉಂಟಾದ ಈರ್ಷ್ಯೆ ಅಥವಾ ಅಸೂಯೆಯು ಅವಳನ್ನು ಸುಮ್ಮನಿರಗೊಡದಂತಾಯಿತು ! ಮೊದಲೇ, ಸತ್ಯಭಾಮೆಯ ಸ್ವಭಾವವೆಂದರೆ, ಶೀಘ್ರಕೋಪ, (ದುಡುಕುತನ,) ಕೋಪಿಸಿಕೊಂಡಾಗ ಅವಳು ಸುಮ್ಮನಿರುವಳಲ್ಲ. ಮನೆಯವರೆಲ್ಲರಮೇಲೆಯೂ ತಿರುಗಿಬೀಳುವಂತೆ ರೇಗುವುದು, ವಟವಟಗುಟ್ಟುವುದು, ಇದೇ ಅವಳ ಸ್ವಭಾವ. ಈಗಳಂತೂ ಅಸೂಯೆಯೂ ಸೇರಿ ಯಾವಾಗಲೂ ದುಮುದುಮುಗುಟ್ಟುವುದೇ ಆಗಿದೆ. ಗಿರಿಜೆಯ ಬಳಿಯಲ್ಲಿ ಮಾತಿಲ್ಲ-ಕಥೆಯಿಲ್ಲ; ಅವಳ ಬಳಿಯಲ್ಲಿ ತಾನು ಮಾತನಾಡದಿದ್ದರೆ ಬಿಡಲಿ, ಮತ್ತಾರಾದರೂ ಮಾತನಾಡಿದರೂ ಸತ್ಯಭಾಮೆಗೆ ಸಹನವಾಗುತ್ತಿರಲಿಲ್ಲವೆಂದೇ ಹೇಳಬಹುದು. ಹೇಗೂ ಈಗ ಸತ್ಯಭಾಮೆಯ ಮನಸ್ಸಿಗೆ ಗಿರಿಜೆಯು ಅಲ್ಲಿರುವುದೇ ಬೇಡವಾಯ್ತೆಂದರೆ ಸಾಕು. ಪಾಪ, ಗಿರಿಜೆಯು ಮಾಡಿದ ಅಪರಾಧವೆಂದರೆ-ಪತಿಯ ಮನಸ್ಸನ್ನು ಒಲಿಸಿಕೊಂಡುದೂ ಅಲ್ಲದೆ, ಮನೆಯವರೆಲ್ಲರನ್ನೂ ಮೆಚ್ಚಿಸಿದಳೆಂಬುದೇ ಮಹದಪರಾಧವು ? ಹಗಲಿರುಳೂ-ಓದುಬರಹ, ಪಟ್ಟಣವಾಸದ ಧಿಟ್ಟತನ, ಕಲಿತವಳೆಂಬ ಗರ್ವ-ನಿರ್ಲಜ್ಜೆ (ನಾಚ್ಗೇಡಿತನ) ವಾಚಾಳಿತನ (ಬಾಯ್ಬಡುಕತನ) ಇವುಗಳೇ ಟೀಕಾತ್ಮಕ ವಿಷಯಗಳಾದುವು. ವಟವಟಗುಟ್ಟದೆ, ಮೋರೆಸೊಟ್ಟಗೆಮಾಡದೆ, ಸರಿಯಾದ ಮಾತೇ ಇಲ್ಲದಂತಾಯ್ತು !

ಇದರಿಂದ ಖತಿಗೊಂಡು ಅಸಮಾಧಾನವನ್ನು ಸೂಚಿಸಿದ ಕಾರಣದಿಂದ ಪತಿಯ ಮೇಲಿನ ಆಗ್ರಹವೂ ಮಿತಿಮೀರಿತು ಆತನು-ತಾನಾಗಿ ಬಂದು ಮಾತನಾಡಿಸಿದಾಗ ಮುಖತಿರುಗಿಸುವುದೂ, ದೂರಸರಿದು ಹೋಗುವುದೂ, ಊಟಕ್ಕೆ ಬಡಿಸುವಾಗಲೂ ದುಮುದುಮುಗುಟ್ಟುವುದೂ. ಕಡೆಗೆ, ಆತನನ್ನೂ, ಮಿತ್ರರನ್ನೂ, ಕುರಿತು ನಿಷ್ಠುರವಾಡುವುದು-ಹೀಗಾಯಿತು. ಸಾಲದುದಕ್ಕೆ ಇದೇ ಸಂದರ್ಭದಲ್ಲಿಯೇ ಅವಳ ತಂಗಿಯೂ ಬಂದು ಅವಳ ಉಬ್ಬಸವನ್ನು ಹೆಚ್ಚಿಸಲು ಆಗಬೇಕಾದ ಅಪಥ್ಯವನ್ನೆಲ್ಲಾ ಮಾಡಿಸಿಬಿಟ್ಟಳು ! (ಕಿವಿಮಾತಿನಿಂದ ಮತ್ತಷ್ಟು ಉಬ್ಬಿಸಿದಳು; ಅವಳ ಅತ್ತೆಗೆ ಚಾಡಿ ಹೇಳಿ ಮನಸ್ಸನ್ನು ತಿರುಗಿಸಿದಳು) ಸಾಲದುದಕ್ಕೆ ಅವಳ ಮಾತಿಗೆ ಅಸ್ತುಕಾರವನ್ನು ಹಾಕಲು ಕಲಹಾಶನ ಸ್ವಭಾವದವನಾದ ಬ್ರಾಹ್ಮಣನೊಬ್ಬನು ಮನೆಯಲ್ಲಿದ್ದನು. ಮೂರೂ ಕೂಡಿದುದು ಪೂರ್ವಸುಕೃತವೆಂಬಂತೆ ಇವೆಲ್ಲಾ ಸೇರಿದುದರಿಂದ ಗಿರಿಜಾ-ಯೋಗಾನಂದರಿಗೆ ಕುಜ-ಕೇತು ದಶಾಭುಕ್ತಿಗಳ ಮಹತ್ಫಲಾನುಭವದಂತಹ ಅನುಭವವುಂಟಾಯಿತು.

ಗಿರಿಜೆಗೆ ಅನುಕೂಲವಾಗಿದ್ದ ದೈವವು ಈಗ ಪ್ರತಿಕೂಲವಾಯಿತು ! ದೈವವೇ ಪ್ರತಿಕೂಲವಾದ ಬಳಿಕ ಕೇಳುವುದಿನ್ನೇನು ? ಅತ್ತೆಗೆ ಗಿರಿಜೆಯ ನೆರಳೇ ಬೀಳಬಾರದಂತಾಯಿತು ! ದಿನದಿನಕ್ಕೆ ಗಿರಿಜೆಗೂ, ಗಿರಿಜೆಯದೆಸೆಯಿಂದ ಯೋಗಾನಂದನಿಗೂ ತಾಯಿ-ಪತ್ನಿಯ ನಿಷ್ಠುರಗಳು ಹೆಚ್ಚುತ್ತಲೇ ಬಂದವು ಗಿರಿಜೆಗೆ ತನ್ನ ಹೃತ್ತಾಪವೊಂದು ತನ್ನಿಂದ ತನ್ನ ಪ್ರಭುವಿಗೆ ಉಂಟಾಗುತ್ತಿರುವ ಕ್ಲೇಶವೊಂದು-ಎರಡೂ ಸೇರಿ ಅತಿಶಯ ಸಂಕಟವುಂಟುಮಾಡಿತು.

ಮನೋರೋಗವು ಜಾಸ್ತಿಯಾದಂತೆಲ್ಲಾ ಶಾರೀರಕ ರೋಗವೂ ಹೆಚ್ಚಿತು. ಯೋಗಾನಂದನ ವಿಚಾರವನ್ನು ಹೇಳುವಂತೆಯೇ ಇರಲಿಲ್ಲ. ಪತಿ-ಪತ್ನಿಯರಿಬ್ಬರೂ ಮನೋರೋಗದಿಂದ ಬೆಂದು ಬೆಂಡಾಗುತ್ತಲಿರುವುದು ಸೇವಾನಂದನಿಗೆ ಸಹನವಾಗಲಿಲ್ಲ ! ಅಣ್ಣನಲ್ಲಿ ಪ್ರಸ್ತಾಪಿಸಿ ನೋಡಿ ಗಿರಿಜೆಗೆ ಪ್ರತ್ಯೇಕ ಸ್ಥಳವನ್ನೇರ್ಪಡಿಸಲು ಆತನನ್ನು ಒತ್ತಾಯದಿಂದ ಒಪ್ಪಿಸಿದನು. ಗಿರಿಜೆಯು ಮೊದಲು ಸಮ್ಮತಿಸಲಿಲ್ಲವಾದರೂ ಪರಿಪರಿಯಿಂದ ಹೇಳಿ ಅವಳನ್ನು ಸಮ್ಮತಿಸಿ ಹವ ಒದಲಾಯಿಸುವ ನೆವವನ್ನು ಮುಂದಿಟ್ಟು ಅವಳನ್ನು ಹೊರಗಿನ ಮನೆಯಲ್ಲಿರಿಸಿ-ಅವಳ ಸಹಾಯಕ್ಕೆ ಒಬ್ಬ ಹೆಂಗಸನ್ನು ಗೊತ್ತು ಮಾಡಿದರು.

ಬೇರೆ ಮನೆಗೆ ಬಂದಬಳಿಕ ಗಿರಿಜೆಗೆ ಪ್ರತ್ಯಕ್ಷನಿಷ್ಠುರಗಳು ತಪ್ಪಿದರೂ ದಿನಕ್ಕೊಂದುಬಾರಿ ಬಂದು ಬಳಿಯಲ್ಲಿ ಕುಳಿತು- ಮಾತು ಕಥೆಗಳನ್ನಾಡಿ ಹೋಗು

ತ್ತಲಿದ್ದ ಪತಿಯ ಆಗಿನ ಮನಸ್ಥಿತಿಯನ್ನು ಆತನ ಮುಖಭಾವ-ಮಾತನಾಡುವ ರೀತಿಗಳ ಮೂಲಕ ತಿಳಿಯುತ್ತಿದ್ದುದರಿಂದ ತಾನಿಲ್ಲಿಗೆ ಬಂದುದು ತನ್ನ ಹೃದಯೇಶ್ವರನಿಗೆ ಬೇಕೆಂದು ಕ್ಲೇಶವನ್ನುಂಟುಮಾಡಿಟ್ಟಂತಾಯಿತೆಂದು ತಿಳಿದಳು. ತನ್ನನ್ನು ಊರಿಗೆ ಕಳುಹಿಸಿಬಿಟ್ಟರೆ ಆತಂಕವು ತಪ್ಪುವದೆಂದು ಹೇಳಿದಳು. ಆದರೆ ಯೋಗಾನಂದನು ಸಮ್ಮತಿಸಲಿಲ್ಲ.

ಬೇರೆಮನೆಗೆ ಬಂದ ಕೆಲವುದಿನಗಳವರೆಗೆ ಗಿರಿಜೆಯ ಬಳಿಗೆ ಯೋಗಾನಂದನು ದಿನವೂ ಬರುತ್ತಿದ್ದನಲ್ಲದೆ ಒಂದೊಂದುದಿನ ಅಲ್ಲಿಯೇ ನಿಲ್ಲುತ್ತಿದ್ದನು. ಆದರೆ ಒಂದೆರಡುವಾರಗಳ ಮೇಲೆ ಆತನು ದಿನಬಿಟ್ಟುದಿನ ಬರುವಂತಾಯ್ತು ! ಬಂದಾಗಲೂ ಯಾರಾದರೂ ಸಂಗತಿಯಲ್ಲಿ ಇದ್ದೇ ಇರುತ್ತಿದ್ದರು. ಆದರೂ ಒಂದೆರಡು ವಾರಗಳಾದವು. ಆಮೇಲೆ ಯೋಗಾನಂದನು ಕಾರ್ಯಾರ್ಥಿಯಾಗಿ ಪರಸ್ಥಳಕ್ಕೆ ಹೋಗಬೇಕಾದುದರಿಂದ ಒಂದು ವಾರದವರೆಗೆ ಗಿರಿಜೆಯ ಬಳಿಗೆ ಬರಲಾಗಲಿಲ್ಲ ! ಈ ಸಂದರ್ಭದಲ್ಲಿ ಗಿರಿಜೆಯ ಮನಸ್ಥಿತಿ ಹೇಗಾಗಿರಬೇಕೆಂದು ನಮ್ಮ ರಮಣೀ ಪಾಠಕರೇ ಊಹಿಸಿ ತಿಳಿಯಬೇಕಲ್ಲದೆ-ನಾವು ಹೇಳಲಾರೆವು.



V

ಪತಿಯು ಒಂದು ವಾರ ಬರುವುದನ್ನು ನಿಲ್ಲಿಸಿದುದರಿಂದ ಗಿರಿಜೆಗೆ ಅಸಹ್ಯವಾದ ತಾಪವೂ ಜೀವನದಲ್ಲಿ ಜಿಗುಪ್ಸೆಯೂ ಉಂಟಾದುವು. ಆತ್ಮಯಜ್ಞಮಾಡಿಕೊಳ್ಳಲಿಕ್ಕೆ ಮನಸ್ಸು ಆತುರಪಟ್ಟಿತು. ಆದರೂ ವಿವೇಚನಾಪರಳಾದ, ಸಾತ್ತ್ವಿಕಸ್ವಭಾವದ ಗಿರಿಜೆಯು ಬಹುಕಷ್ಟದಿಂದ ಮನಸ್ಸಿನ ವೇಗವನ್ನು ತಡೆದು, ತನ್ನ ಐಹಿಕ-ಸುಖಾಭಿಲಾಷೆಯನ್ನೆಲ್ಲಾ ಬಿಟ್ಟುಕೊಟ್ಟಳು. ತನ್ನ ಮುಂದಿನ ಕಾಲಮಾನವನ್ನು ಯಾವ ಮಾರ್ಗದಲ್ಲಿ ನಡೆಯಿಸಬೇಕೆಂಬ ವಿಚಾರದಲ್ಲಿ ದೃಢಸಂಕಲ್ಪ ಮಾಡಿಕೊಂಡಳು. ಕಡೆಗೆ ಶೀನಪ್ಪನಿಗೆ ಬರಹೇಳಿ ಕಾಗದವನ್ನು ಬರೆದಳು. ಒಂದೆರಡು ದಿನಗಳಲ್ಲಿಯೇ ಶೀನಪ್ಪನಿಂದ ತಂತಿಯೂ ಬಂದಿತು.

ತಮ್ಮನು ಹೊರಟಿದ್ದೇನೆಂದು ಕೊಟ್ಟ ತಂತಿಯವಾರ್ತೆಯು ಮುಟ್ಟಿದ ಬಳಿಕ, ಗಿರಿಜೆಗೆ ತನ್ನ ಮುಂದಿನ ಸನ್ನಾಹದಲ್ಲಿ ಜಾಗರೂಕತೆಯುಂಟಾಯಿತು ! ಬಾಡಿಗೆಯ ಗಾಡಿಯನ್ನು ಮಾಡಿಕೊಂಡು ಅತ್ತೆಯಮನೆಗೆ ಬಂದಳು. ಯೋಗಾನಂದನು ಇನ್ನೂ ಊರಿಗೆ ಬಂದಿರಲಿಲ್ಲ. ಗಿರಿಜೆಯು ಮನೆಗೆ ಬಂದೊಡನೆ ಹುಡುಗರೆಲ್ಲರೂ ಬಳಿಗೆ ಓಡಿಬಂದು ಬಳಸಿನಿಂತು, ಅವಳಲ್ಲಿ ಅಪವಾತತೊಡಗಿದರು. ಅತ್ತೆಯ

ಬಂದು ನೋಡಿದಳು. ಗಿರಿಜೆಯು ತವರ್ಮನೆಯಿಂದ ಬಂದಕಾಲದಲ್ಲಿದ್ದುದಕ್ಕೂ ಈಗಾಗಿರುವನಕ್ಕೂ ಇರುವ ಹೆಚ್ಚು ಕಡಿಮೆಯನ್ನು ಥಟ್ಟನೆ ಕಂಡುಹಿಡಿದಳು. ಕೊರಗಿ ಸೊರಗಿ ಸಪ್ಪೆಯಾಗಿರುವ ಸೊಸೆಯನ್ನು ನೋಡಿ ಅತ್ತೆಗೆ ಕಿಂಚಿತ್ ಮರುಕವೂ ಉಂಟಾಯಿತು. ಕರೆಯಿಸದೆ ತಾನಾಗಿ ಸಂತೋಷದಿಂದ ಬಂದು ಹುಡುಗರೊಡನೆ ಮಾತನಾಡುತ್ತಿದ್ದ ಸೊಸೆಯನ್ನು ಕಂಡು ಬೆಚ್ಚರಪಟ್ಟಳು.

ಅತ್ತೆಯು ಬಂದು ಬೆಚ್ಚರಗೊಂಡು ನೋಡುತ್ತಿದ್ದುದನ್ನು ಕಂಡು ಗಿರಿಜೆಯು ನಮಸ್ಕರಿಸಿ-ತಲೆಬಾಗಿ ನಿಂತುಕೊಂಡಳು. ಅತ್ತೆಯು ಸೊಸೆಯ ಕ್ಷೇಮಸಮಾಚಾರವನ್ನು ವಿಚಾರಿಸಿದ ಬಳಿಕ ಒಳಗೆ ಕರೆದುಕೊಂಡು ಹೋದಳು. ಗಿರಿಜೆಯೂ ಅತ್ತೆಯಮಾತಿನಂತೆ ಮಡಿಯುಟ್ಟು ಅಲ್ಲಿಯೇ ಊಟಮಾಡಿದಳು. ಮಧ್ಯಾಹ್ನದಮೇಲೆ ಗಿರಿಜೆಯು ಅತ್ತೆಯಬಳಿಗೆ ಒಂದು ಮಾತನ್ನು ಹೇಳಿದಳು:—'ಊರಿಂದ ನನ್ನ ತಮ್ಮನು ನಾಳಿನದಿನ ಬರುತ್ತಾನಂತೆ! ನಾನಿನ್ನು ಹೊರಡಲೆ?'

ಅತ್ತೆ :—'ಹೋದರಾಯಿತು. ಅವನೇನೀಗ ಬರುತ್ತಾನೆ?'

ಗಿರಿಜಾ :—ಬಹುಶಃ ನನ್ನನ್ನು ಕರೆದುಕೊಂಡು ಹೋಗಲಿಕ್ಕೆ ಬರಬಹುದು,

ಅತ್ತೆ :—ನಿಮ್ಮ ಮನೆಯಲ್ಲಿ ವಿಶೇಷವೇನು ?

ಗಿರಿ :—ಏನೂ ಇಲ್ಲ. ಸುಮ್ಮನೆಕರೆದೊಯ್ಯುತ್ತಾನೋ-ಹೇಗೋ!

ಅತ್ತೆ :—ನೀನು ಹೊರಟು ಹೋಗುವವಳೇನು, ಹಾಗಾದರೆ ?

ಗಿರಿ :—(ಉಗುಳುನುಂಗಿ) ಮತ್ತೇನುಮಾಡಲಿ, ಇಲ್ಲಿ ಎಲ್ಲರೂ ಕಳುಹಿಸಿಕೊಟ್ಟು, ಆತನೂ ಕರೆದೊಯ್ಯುವುದಾದರೆ ಹೋಗಬೇಕೆಂದಿದ್ದೇನೆ !

ಅತ್ತೆ :—ನಾವು ಕಳುಹಿಸುವುದೇನು ? ನಿನ್ನಿಷ್ಟ ಬಂದಂತೆ ಮಾಡಬಹುದು!

ಗಿರಿ :—ಎಲ್ಲವನ್ನೂ ನನ್ನ ಇಷ್ಟದಂತೆ ಮಾಡಲಾಗುವುದಿಲ್ಲ. ಸುಮ್ಮನೆ ಇಲ್ಲಿ ಕುಳಿತು ಕಾಲಕಳೆಯುವುದಕ್ಕೂ-ನನ್ನ ದೆಸೆಯಿಂದ ಮತ್ತೊಬ್ಬರಿಗೆ ಕಷ್ಟಕೊಡಲಿಕ್ಕೂ ನನಗೇಕೋ ಬೇಡವಾಗಿದೆ !

ಅತ್ತೆ:—ನಿನಗೇನು ಕಷ್ಟವಾಗಿದೆ! ನಿನ್ನದೇ ರಾಜ್ಯಭಾರವಾಗಿದೆಯಲ್ಲಾ ?

ಗಿರಿ :—ನನಗಂತಹ ರಾಜ್ಯಭಾರವು ಬೇಡವಾಗಿದೆ! ಕಣ್ಮರೆಯಾಗಿ, ದೂರದಲ್ಲಿದ್ದುಕೊಂಡು, ಯಾರಿಗೂ ಭಾರವಾಗದಂತೆ ನನ್ನ ಮುಂದಿನ ಕಾಲವನ್ನು ಶಾಂತರೀತಿಯಲ್ಲಿ ಕಳೆಯಬೇಕೆಂದು ಗೊತ್ತುಮಾಡಿಕೊಂಡಿದ್ದೇನೆ ನಾನಾಗಿ ಬಂದು ತಮ್ಮ ಮನಸ್ಸಿಗಿಲ್ಲಿ ಇಷ್ಟು ಕಷ್ಟವನ್ನುಂಟುಮಾಡಿದೆನೆಂಬ ಪರಿತಾಪವು ನನಗೆ ಸಹಿಸಲಿಕ್ಕಾಗದಷ್ಟಿದೆ!

ಅತ್ತೆ :—ಬೇಕಾದಂತೆ ಮಾಡು; ನಿನ್ನನ್ನು ಬಾರೆನ್ನಲಿಕ್ಕೂ ಹೋಗೆನ್ನಲಿಕ್ಕೂ ನನಗೆ ಅಧಿಕಾರವಿಲ್ಲ. ನಾನು ನಿಮ್ಮ ಸಂಬಂಧವಾಗಿ ಇಷ್ಟು ಪ್ರಯತ್ನ ಮಾಡಿದವಳಲ್ಲ. ನೀವು ನೀವೇ ಮಾತನಾಡಿಕೊಂಡು ಕುಶಿಬಂದಂತೆ ಮಾಡಿಕೊಳ್ಳಬಹುದು !

ಗಿರಿಜೆಗೆ ಈ ಉತ್ತರದಿಂದ ಸಂತೋಷವೇ ಆಯಿತೋ ಸಂತಾಪವೇ ಆಯಿತೋ ದೇವರಿಗೇಗೊತ್ತು. ಆದರೆ ಯಾವಮಾತನ್ನೂ ಆಡಲಿಲ್ಲ. ಅಲ್ಲಿಂದ ಎದ್ದು ಬಂದು, ಅಕ್ಕ ತಂಗಿಯರಲ್ಲಿಯೂ ಮಾತನಾಡಿಕೊಂಡು, ಸಾಯಂಕಾಲಕ್ಕೆ ಮತ್ತೆ ತನ್ನ ಸ್ಥಳಕ್ಕೆ ಹೊರಟು ಹೋದಳು.

---

vi

ಶೀನಪ್ಪನು ಬಂದಾಗ ಯೋಗಾನಂದನು ಇನ್ನೂ ಬಂದಿರಲಿಲ್ಲ. ಎರಡು ದಿನಗಳಾದ ಮೇಲೆ ಊರಿಗೆ ಬಂದನು. ಮನೆಗೆ ಬಂದೊಡನೆ, ಗಿರಿಜೆಯನ್ನು ಕರೆದೊಯ್ಯಲು ಶೀನಪ್ಪನು ಬಂದಿರುವನೆಂದೂ ಗಿರಿಜೆಯು ಊರಿಗೆ ಹೋಗಲು ಒಂಟಿಗಾಲಲ್ಲಿ ನಿಂತಿರುವಳೆಂದೂ ಮನೆಯವರೆಲ್ಲರೂ ತಮತಮಗೆ ತೋರಿದಂತೆ ಹೇಳಿದರು. ಯೋಗಾನಂದನಿಗೆ ಅವರ ಮಾತಿನಿಂದ ಸಮಾಧಾನವೇ ಆಯಿತೋ-ಸಂಕಟವೇ ಆಯಿತೋ-ಹೇಗೂ, ಆತನು ತುಟಿಗಳನ್ನು ಅಲುಗಿಸಲಿಲ್ಲ.

ಸಾಯಂಕಾಲದಮೇಲೆ ಗಿರಿಜೆಯಿದ್ದ ಮನೆಗೆ ಬಂದನು. ಮನೆಯಲ್ಲಿ ಗಿರಿಜೆಯೊಬ್ಬಳೇ ಕುಳಿತು ಓದುತ್ತಲಿದ್ದವಳು,-ಪತಿಯು ಬಂದುದನ್ನು ನೋಡಿ, ಎದ್ದು ನಿಂತುಕೊಂಡಳು. ಯೋಗಾನಂದನು ಬಂದು ಅಂಗಿ ಪಂಚೆಗಳನ್ನು ತೆಗೆದಿರಿಸಿ ಚಾಪೆಯಮೇಲೆ ಮಲಗಿಕೊಂಡು ಗಿರಿಜೆಯನ್ನು ಒಳಗೆ ಬಂದು ಕುಳ್ಳಿರುವಂತೆ ಕೈಯಿಂದ ಸನ್ನೆಮಾಡಿದನು. ಗಿರಿಜೆಯು ಸಮಾಧಾನದಿಂದಲೇ ಬಂದು ಬಳಿಯಲ್ಲಿ ಕುಳಿತುಕೊಂಡಳು. ನಾಲ್ಕಾರು ನಿಮಿಷಗಳವರೆಗೂ ಯೋಗಾನಂದನು ಮಾತನಾಡದೆ ಏನೋ ವಿಚಾರಮಾಡುತ್ತಿದ್ದನು. ಗಿರಿಜೆಯು ಸುಮ್ಮನಿರಲಾರದೆ ತಾನೇ ಮಾತಿಗೆ ಮೊದಲು ಮಾಡಿದಳು. ‘ದೇಹಸ್ಥಿತಿ ನೆಟ್ಟಗಿದೆಯಷ್ಟೆ ?’

ಯೋಗಾ :—ಹುಂ-

ಗಿರಿ :—ಹೋಗಿದ್ದ ಕೆಲಸವೆಲ್ಲಾ ಆಯಿತೋ,-?

ಯೋಗಾ :—ಆದಂತೆಯೇ !

ಕಸಂಬಂಧವಾದ ಕ್ಷಣಿಕವೈಷಯಿಕ ಸುಖಾನುಭವದಲ್ಲಿಲ್ಲ. ರಾಧಾಮಾಧವನ ಅನುಗ್ರಹದಿಂದಲೂ ತಮ್ಮ ಸ್ನೇಹ ಸಮಾದರಗಳಿಂದಲೂ ನಾನು ಯಥೇಷ್ಟ ಸುಖಸಂತೋಷಗಳನ್ನು ಅನುಭವಿಸುತ್ತಿದ್ದೇನೆ. ನಾನಿಲ್ಲದಿದ್ದರೆ ತಮಗಾಗಲೀ-ತಮ್ಮನ್ನೇ ನಂಬಿರುವ ಅಕ್ಕನವರಿಗಾಗಲೀ ಇಷ್ಟು ಸುಖವಾಗುವುದಿಲ್ಲ-ಇದು ಖಂಡಿತ! ನಾನು ಊರಿಗೆ (ತವರ್ಮನೆಗೆ) ಹೋಗಿ ಅಲ್ಲಿದ್ದರೆ, ಇಲ್ಲಿರುವವರೂ ಸುಖವಾಗಿರಬಹುದು! ಸ್ವಾಮಿಯು ಅನುಗ್ರಹಮಾಡಿ ಅಲ್ಲಿಗೆಬಂದಾಗ ಕೆಲವುಕಾಲ ತಮ್ಮ ಸೇವಾಸುಖವು ನನಗೂ ಲಭಿಸಬಹುದು. ಅಷ್ಟುಮಾತ್ರ ಅನುಗ್ರಹಮಾಡಬೇಕೆಂಬುದೇ ನನ್ನ ವಿನಂತಿ!

ಯೋಗಾನಂದನಿಗೂ ಗಿರಿಜೆಗೂ ಇನ್ನೂ ಎಷ್ಟೋ ಮಾತುಕಥೆಗಳಾದುವು. ಕಡೆಗೆ ಶೀನಪ್ಪನೂ ಬಂದುಸೇರಿದನು. ಮೂವರೂಸೇರಿ ಆಲೋಚಿಸಿದರು. ಗಿರಿಜೆಯನ್ನು ಕಳುಹಿಸಲಿಕ್ಕೆ ಯೋಗಾನಂದನ ಸಮ್ಮತಿಯೂ ದೊರೆದಿತು. ಅದರೊಡನೆ ಗಿರಿಜೆಯು ಅಲ್ಲಿ ಮಾಡಬೇಕಾದ ಕೆಲವು ಕೆಲಸಗಳು ನಿಯಮಿಸಲ್ಪಟ್ಟವು. ಗಿರಿಜೆಯೂ ಒಪ್ಪಿದಳು. ಯೋಗಾನಂದನು ವರ್ಷಕ್ಕೊಮ್ಮೆ ತಾನು ಗಿರಿಜೆಯಬಳಿಗೆ ಬಂದು ಒಂದೆರಡು ತಿಂಗಳಿದ್ದು ಬರುವಂತೆಯೂ, ಅಗತ್ಯವಾದಾಗ ತನ್ನ ಬಳಿಗೆ ಕರೆಯಿಸಿಕೊಂಡು ತಿಂಗಳೆರಡು ತಿಂಗಳು ಇರಿಸಿಕೊಂಡಿದ್ದು ಮತ್ತೆ ಕಳುಹಿಸುವಂತೆಯೂ ವಾಗ್ದಾನಮಾಡಿದನು. ಈ ವಿಚಾರವನ್ನು ತಮ್ಮನಲ್ಲಿಯೂ ಹೇಳಿದನು. ಸೇವಾನಂದನಿಗೂ ಈ ವಿಚಾರವು ಸಮರ್ಪಕವಾಗಿತೋರಿ-ಆತನೂ ಸಮ್ಮತಿಸಿದನು. ಮನೆಯವರೆಲ್ಲರೂ ಗಿರಿಜೆಯು ಹೊರಟು ಹೋಗುವುದನ್ನು ಕುರಿತು ಸಂತೋಷದಿಂದ ಅನುಮೋದಿಸಿದರು. ಗಿರಿಜೆಯು ಹೊರಡಲು ಅತ್ತೆಯ-ಅಕ್ಕನ ಅಪ್ಪಣೆಯನ್ನೂ ಪಡೆದುಕೊಂಡಳು. ಸತ್ಯಭಾಮೆಯ ಮನಸ್ಸಿಗೆ ಆನಂದವಾಯಿತೆಂದು ಬೇರೆ ಹೇಳಬೇಕಾಗಿಲ್ಲ!

ಗಿರಿಜಾಬಾಯಿಗೆ ಈಗ ಕೆಲವು ದೇಶಸೇವಾಕಾರ್ಯಕ್ರಮಗಳು ವಿಧಾಯಕವಾಗಿವೆ. ಗಿರಿಜಾಬಾಯಿಯೆಂದರೆ ಈಗ ರಾಧಾಮಾಧವನ ಧ್ಯಾನ-ಧಾರಣಗಳಿಂದ ಆತ್ಮಸಮಾಧಾನವನ್ನು ಹೊಂದಿದವಳಾಗಿಯೂ ಪತಿಯ ಆಜ್ಞೆಯನ್ನು ಪಾಲಿಸುವ ಪತಿಪರಾಯಣೆಯಾಗಿಯೂ ಶುದ್ಧತಪಸ್ವಿನಿಯಂತೆ ನಿರಹಂಕಾರ ಭಾವದಿಂದ ಕಾಲಕ್ಷೇಪಮಾಡುತ್ತಿರುವಳು. ತನ್ನ ಕಾರ್ಯಕ್ರಮಗಳ ವರದಿಯನ್ನು ವಾರಕ್ಕೊಮ್ಮೆ ತಪ್ಪದೆ ಪತಿಗೆ ಲಿಖಿತಮೂಲಕವಾಗಿ ಒಪ್ಪಿಸುತ್ತಿರುವುದರಿಂದ ಯೋಗಾನಂದನೂ ಸಮಾಧಾನದಲ್ಲಿರುವನೆಂದೇ ಹೇಳಬೇಕು!

ಕೃಷ್ಣಾರ್ಪಣಮಸ್ತು